॥ ಶ್ರೀ: ॥ Checked 1969

ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯ,

ಉಡುಪಿ.

ದಾಸರಪದಗಳು.

# ಪುರಂದರದಾಸರಕೀರ್ತನೆ

ಐದನೆಯ ಭಾಗವು.

ಪ್ರಥಮಮುದ್ರಣ ೧೦೦೦.

ಶ್ರೀಕೃಷ್ಣಮುದ್ರಣಾಲಯ, ಉಡುಪಿ.

1930.

# ಉಪೋದ್ಘಾತವು.

ಹರಿಭಕ್ತಾಗ್ರೇಸರರೆನಿಸಿದ ಧ್ರುವ ಪ್ರಹ್ಲಾದ ಮೊದಲಾದ ಪುಣ್ಯಕೀರ್ತಿಗಳ ಹೃದಯಕ್ಷೇತ್ರದಲ್ಲೇ ಮೊತ್ತಮೊದಲು ಹರಿಭಕ್ತಿ ಕಲ್ಪಲತೆಯನ್ನು ಬಿತ್ತಿದ ಸಾಕ್ಷಾನ್ನಾರದಮುನಿಗಳೇ ಪುರಂದರ ದಾಸರಾಗಿ ಅವತರಿಸಿ, ನಾಲ್ಕುಮುಕ್ಕಾಲುಲಕ್ಷ ಹರಿಕೀರ್ತನೆ ಗಳನ್ನು ರಚಿಸಿ, ಕಲಿಯುಗದಲ್ಲಿ ಹುಟ್ಟಿ ಜ್ಞಾನಶೂನ್ಯರಾದ ಸ್ತ್ರೀ ಬಾಲರೇ ಮೊದಲಾದ ಸರ್ವಜನರ ಹೃದಯದಲ್ಲೂ ಹರಿಭಕ್ತಿ ಲತೆಯನ್ನು ಬೇರೂರಿಸಿ, ಜೀವವರ್ಗವನ್ನೇ ಉದ್ಧರಿಸಿರುತ್ತಾರೆ.

ಇವರು ರಚಿಸಿದ ಕೀರ್ತನೆಗಳೂ ಸುಳಾದಿಗಳೂ ಉಗಾ ಭೋಗಗಳೂ ಸಕಲ ಶಾಸ್ತ್ರಸಮುದ್ರವನ್ನು ಮಥನಮಾಡಿ ದೊರ ಕಿದ ಅಮೃತದಂತಿರುವ ಸಾರರಹಸ್ಯವನ್ನು ಪಂಡಿತ ಪಾಮರ ಸಾಧಾರಣವಾಗಿ ಅವರವರ ಯೋಗ್ಯತಾನುಸಾರ ತಿಳಿಸಿ, ಹರಿ ಯೊಲಿಮೆಯನ್ನು ಪಡೆಯಲು ಮುಖ್ಯಾಧಾರವಾಗಿದ್ದು ಅಲ್ಲಲ್ಲಿ ಮುಖಪಾಠವಾಗಿ ಕೆಲಕೆಲವು ಪ್ರಚಾರದಲ್ಲಿದ್ದರೂ, ಎಷ್ಟೋ ಅಂಶಗಳು ಕಾಲಬಲದಿಂದ ಮಾಯವಾಗುತ್ತ ಬರುವದರಿಂದ, ಈಗ ಪ್ರಚಾರದಲ್ಲಿದ್ದಷ್ಟನ್ನಾದರೂ ಛಾಪಿಸಿ ಪ್ರಕಟಿಸದಿದ್ದರೆ ಮುಂದೆ ಅವೂ ನಷ್ಟವಾದಾವೆಂದು ಸಂಕಲ್ಪಿಸಿ, ಅನೇಕ ಮಹನೀ ಯರ ಸಹಾಯದಿಂದ ಸಂಗ್ರಹಿಸಿ ಈ ಪುರಂದರದಾಸರ ಕೀರ್ತನೆ ಗಳ ನಾಲ್ಕು ಭಾಗಗಳನ್ನು ಈ ಮೊದಲು ಪ್ರಕಟಿಸಿದಂತೆಯೇ ದೈವಾನುಗ್ರಹದಿಂದ ಈ ಐದನೇ ಭಾಗವನ್ನು ಪ್ರಕಟಿಸಲು ಅನು ಕೂಲವಾದುದಕ್ಕಾಗಿ ಶ್ರೀಹರಿಗುರುಗಳ ಅಡಿದಾವರೆಗಳಿಗೆ ಅನೇಕ ವಂದನೆಗಳನ್ನರ್ಪಿಸುತ್ತೇವೆ.

ಈ ಐದನೇ ಭಾಗದಲ್ಲಿ ಪ್ರಕಟಿಸಿದ ಕೀರ್ತನೆಗಳಲ್ಲಿ ಕೆಲವು ಕೀರ್ತನೆಗಳು ಬೇರೆಭಾಗದಲ್ಲಿದ್ದಂತೆ ಕಂಡುಬಂದರೂ, ಅವುಗಳಲ್ಲಿ ಪಲ್ಲವ್ಯತ್ಯಾಸವಾಗಲೀ ನುಡಿವ್ಯತ್ಯಾಸವಾಗಲೀ ಇರುವುದರಿಂದ ಅವುಗಳಲ್ಲಿ ಯಾವುದು ಸರಿ ಯಾವುದು ಸರಿಯಲ್ಲವೆಂದು ಬಲ್ಲವರೇ ನಿಶ್ಚಯಿಸಬೇಕೆಂದು ದೊರಕಿದಂತೆ ಪ್ರಕಟಿಸಿದ್ದೇವೆ. ಬಲ್ಲವರು ಕಂಡು ದಯವಿಟ್ಟು ತಿಳಿಸಿದರೆ ಮುಂದಿನ ಮುದ್ರಣದಲ್ಲಿ ಸರಿಪಡಿಸುವರೆ ಅನುಕೂಲವಾಗುವುದು. ಈ ಐದನೇ ಭಾಗದಲ್ಲಿ ಭಗವದುಪಾಸನೆಗೆ ಅತ್ಯುಪಯುಕ್ತವಾದ ಭಗವದ್ಗೀತಾಸಾರವೆಂಬ ಕೀರ್ತನೆಯನ್ನು ಮಾತ್ರವಲ್ಲದೆ, ಪುರಂದರದಾಸರ ಉಗಾಭೋಗಗಳನ್ನೂ ಪ್ರಕಟಿಸಿರುತ್ತೇವೆ. ಈ ಉಗಾಭೋಗಗಳು ಸಂಧ್ಯಾವಂದನ ಹರಿಪೂಜೆ ಮೊದಲಾದ ನಿತ್ಯನೈಮಿತ್ತಿಕಕರ್ಮೋಪಯುಕ್ತ ಧರ್ಮಶಾಸ್ತ್ರದ ತತ್ವವನ್ನೂ ಅನೇಕ ಪ್ರಮೇಯವನ್ನೂ ಬೋಧಿಸಿ, ಆ ದಾಸವರ್ಯರ ಲೋಕೋಪಕಾರವನ್ನು ಒದೆದು ತೋರಿಸುವ ಜಯಪತಾಕೆಗಳಂತೆ ಇವೆ ಯೆಂಬುದು ವಾಚಕರಿಗೆ ಸ್ಪಷ್ಟವಾಗದಿರದು.

ನಾಲ್ಕನೇ ಭಾಗದಂತೆ ಈ ಐದನೇ ಭಾಗದ ಮುದ್ರಣದಲ್ಲೂ ಸಂಪೂರ್ಣವಾಗಿ ಕೀರ್ತನೆಗಳನ್ನು ಕ್ರಮಪಟ್ಟು ಸಂಗ್ರಹಿಸಿ ಕಳುಹಿಸಿ ಸಹಾಯಮಾಡಿದ ನಾರ್ತ್ ಆರ್ಕಾಡುಜಿಲ್ಲಾ ಪೋಳೂರು ತಾಲೂಕಾ ಪೋಳೂರಲ್ಲಿರುವ ಒಘೂರು ಮಿರಾಸ್‌ದಾರರು ಶ್ರೀಮಾನ್ ಹಜೀಬು ರಂಗರಾಯರಿಗೆ ನನ್ನ ಕೃತಜ್ಞತಾಪೂರ್ವಕ ಅನಂತ ಪ್ರಣಾಮಗಳು. ಇತಿ ಸುಜನವಿಧೇಯ,

| | |
|---|---|
| **ಉಡುಪಿ,** | **ಪಾವಂಜೆ ಗುರುರಾವ್,** |
| ತಾ. 22-11-'30 | ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯ. |

# ಅನುಕ್ರಮಣಿಕೆ.

॥ ಶ್ರೀಃ ॥

॥ ಶ್ರೀಗುರುಭ್ಯೋ ನಮಃ ॥

॥ ಶ್ರೀಗೋಪಾಲಕೃಷ್ಣಾಯ ನಮಃ ॥

# ಪುರಂದರದಾಸರ ಕೀರ್ತನೆಗಳು.

## ಐದನೆಯ ಭಾಗವು.

### ವಿನಾಯಕಸ್ತೋತ್ರ.

೧. ರಾಗ ನಾಟಿ.

ಆದಿಯಲಿ ಗಜಮುಖನ ಅರ್ಚಿಸಿ ಆರಂಭಿಸಲು । ಆವ ಬಗೆ ಕಾರ್ಯತತಿ ಸಿದ್ಧಿಗೊಳಿಸಿ । ಮೋದದಿಂ ಸಲಿಸುವ ಮನದಿಷ್ಟವ । ಸಾಧುಜನರೆಲ್ಲ ಕೇಳಿ ಸಕಲ ಸುರರಿಂಗೆ । ಮಾಧವನೇ ನೇಮಿಸಿಪ್ಪ ಈಯಧಿಕಾರವ । ಆದರದಿಂದ ಅವರವರೊಳು ನಿಂದು ಕಾರ್ಯಗಳ । ಭೇದಗೊಳಿಸದೆ ಮಾಳ್ಪ ಪುರಂದರವಿಠಲ ॥ ಆದಿ ॥

೨. ರಾಗ ಸೌರಾಷ್ಟ್ರ, ಝಾಪುತಾಳ.

ಶರಣು ಶರಣು ॥ ಪಲ್ಲ ॥ ಶರಣು ಜನಕನ ಕನಕರೂಪನೆ ಕಾಮಿನಿ ಸಂಗದೂರನೆ । ಶರಣು ಸಾಂಬನ ಪ್ರೀತಿಪುತ್ರನೆ ಶರಣಜನರಿಗೆ ಮಿತ್ರನೆ ॥ ಅನುಪಲ್ಲ ॥ ಏಕದಂತನೆ ಲೋಕಖ್ಯಾತನೆ । ಏಕವಾಕ್ಯ ಪ್ರವೀಣನೆ । ಏಕವಿಂಶತಿ ಪತ್ರಪೂಜಿತ । ನೇಕ ವಿಘ್ನವಿನಾಯಕಾ ॥ ೧ ॥ ಲಂಬಕರ್ಣನೆ ನಾಸಿಕಾಧರನೆ । ಗಾಂಭೀರ್ಯ ಇಭಗುಣಸಾರನೇ ॥ ಕಂಬುಕಂಧರ ಇಂದುಮೌಳಿನ । ಚಂದನ ಚರ್ಚಿತಾಂಗನೇ ॥ ೨ ॥ ಚತುರ್ಬಾಹು ಚರಣ ತೊಡಲನೆ । ಚತುರ ಆಯುಧಧಾರನೇ ॥ ಮತಿಯುಮಂತನೆ ಮಲಿನಜನಿತನೆ । ಅತಿಯ ಮಧುರಾಹಾರನೇ ॥ ೩ ॥ ವಕ್ರ

ತುಂಡನೆ ಮಹಾಕಾಯನೆ । ಅರ್ಕಕೋಟಿಪ್ರದೀಪನೇ ॥ ಚಕ್ರಧರ ಹರ ಬ್ರಹ್ಮಪೂಜಿತ । ರಕ್ತವಸ್ತ್ರ ಧಾರನೇ ॥ ೪ ॥ ಮೂಷಕಾಸನ ಶೇಷಭೂಷಣ ಆ । ಶೇಷ ವಿಘ್ನವಿನಾಯಕಾ ॥ ದಾಸ ಪುರಂದರವಿಠಲೇಶನ ಈಶ ಗುಣಗಳ ಪೊಗಳುವಿ ॥ ೫ ॥ ಶ್ರೀಃ ॥

## ಭಾರತಿಸ್ತೋತ್ರ.

### ೩. ರಾಗ ನಾಟಿ.

ಸಕಲ ಸಾಧನಕೆಲ್ಲ ಸಿದ್ಧಿಗೊಳಿಸುವದು । ಭಕುತಿ ಕಾರಣವಲ್ಲದೆ ಬೇರೆ ಸಾಧನವುಂಟೆ । ಯುಕುತಿ ಜನರೆಲ್ಲ ಕೇಳಿ ಇತರ ಸಾಧನಕೆಲ್ಲ । ಭಕುತಿ ಕಾರಣವಲ್ಲದೆ ಬೇರೆ । ಭಕುತಿಗಭಿಮಾನಿ ಭಾರತಿದೇವಿಯರ ಕರುಣ ಯುಕುತಿ ಸಾಧನವೆಂದು ಮನದಿ ಭಜಿಸಿ । ಅಖಿಲೇಶ ಪುರಂದರವಿಠಲ ತಾನೊಲಿವ ॥ ಶ್ರೀಃ ॥

## ಸರಸ್ವತಿಸ್ತೋತ್ರ.

### ೪. ರಾಗ ನಾಟಿ.

ವರವೇದ ಪುರಾಣ ವಿವಿಧ ಶಾಸ್ತ್ರಗಳಿಗೆ । ಸರಸಿಜೋದ್ಭವನರಸಿ ಸರಸ್ವತಿದೇವಿಯು । ಪರಮ ಮುಖ್ಯಾಭಿಮಾನಿಯೆಂದು ತಿಳಿದು । ನಿರತ ಭಜಿಸುವ ಜನಕೆ ನಿಜಗತಿಯ ಪಾಲಿಸುವ । ಶಿರಿಯರಸ ಪುರಂದರವಿಠಲ ತಾನೊಲಿವ ॥ ಶ್ರೀಃ ॥

### ೫. ರಾಗ ಯದುಕುಲಕಾಂಬೋಧಿ, ಝಂಪೆತಾಳ.

ಒಂದೇ ಮನದಿ ಭಜಿಸು ವಾಗ್ದೇವಿಯಾ ॥ ಪಲ್ಲ ॥ ಇಂದು ಮತಿ ಕೊಡುವಳು ಹರಿಯ ಧ್ಯಾನದಲಿ ॥ ಅನುಪಲ್ಲ ॥ ಹಿಂದೆ ಪ್ರಹ್ಲಾದನು ಕಮಲಜನ ಸತಿಗೆರಗಿ । ನಿಂದು ಆರಾಧಿಸಲು ಹರಿ ವಿಶ್ವನೆಂದು ॥ ಬಂದ ವಿಘ್ನವ ಕಳೆದು ಭಾವಶುದ್ಧಿಯನಿತ್ತು । ಪೊಂದಿಸಿದಳಾಗ ಶ್ರೀಹರಿಯ ಚರಣದಲಿ ॥ ೧ ॥ ಅಂದು ದಶಮುಖನನುಜ ವಂದಿಸದೆ ವಾಣಿಯನು । ನಿಂದು ತಪವನು ಗೈಯೆ ಬಹುಕಾಲವು ॥ ಅಂದದಿಂದಜ

ಮೆಚ್ಚಿ ವರವಧಿಕ ಬೇಡಿಸಲು । ನಿಂದು ಜಿಹ್ವೆಯುಲಿ ನಿದ್ರೆಯ ಬೇಡಿಸಿ ದಳು ॥ ೨ ॥ ಅರಿತು ಭಜಿಸಲು ಬಿಡದೆ ಅಜನರಸಿಯು ನಿತ್ಯ । ಗುರು ತರವಾದ ವಾಕ್ಸಿದ್ಧಿಯನಿತ್ತು ॥ ತ್ವರಿತದಿ ಪುರಂದರವಿಠಲನ ಸೇವೆಯೊಳಿರಿಸಿ । ಪರತತ್ವವಾದ ಕಥಾಮೃತ ನುಡಿಸುವಳು ॥ ೩ ॥ ಶ್ರೀ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೬. ರಾಗ ಅಟತಾಳ.

ಶರಣೆಂಬೆ ವಾಣಿ ಪೊರೆಯೆ ಕಲ್ಯಾಣಿ ॥ ಪಲ್ಲ ॥ ವಾಗಭಿಮಾನಿ ವರ ಬ್ರಹ್ಮಾಣಿ । ಸುಂದರವೇಣಿ ಸುಚರಿತ್ರಾಣಿ ॥ ೧ ॥ ಜಗದೊಳು ನಿಮ್ಮ ಪೊಗಳುವೆನಮ್ಮ । ಹರಿಯ ತೋರಿಸೆಂದು ಪ್ರಾರ್ಥಿಪೆನಮ್ಮಾ ॥ ೨ ॥ ಪಾಡುವೆ ಶ್ರುತಿಯಾ ಬೇಡುವೆ ಮತಿಯಾ । ಪುರಂದರವಿಠಲನ ತೋರ ಪೊಸೆಯಾ ॥ ೩ ॥ ಶ್ರೀ ॥

## ರುದ್ರದೇವರ ಸ್ತೋತ್ರ.

೭. ರಾಗ ಮುಖಾರಿ, ಆದಿತಾಳ.

ಕರುಣಾನಿಧಿಯೆ ಈಶ ಅರುಣಗಿರಿಯ ವಾಸ ॥ ಪಲ್ಲ ॥ ಮುರನಪ್ಪೈರಿಯ ಚರಣದಾಸಾ । ಅರುಣರವಿಯ ಕೋಟಿಪ್ರಕಾಶ ॥ ಅನುಪಲ್ಲ ॥ ಭಸ್ಮಭೂಷಿತ ಸರ್ವಾಂಗಾ । ಮತ್ತೆ ತಲೆಯೊಳಿಪ್ಪ ಗಂಗಾ ॥ ವಸ್ತ್ರರಹಿತ ದಿಗಂಬರ ಲಿಂಗಾ । ಕಸ್ತೂರಿ ರಂಗನ ಪಾದದ ಭೃಂಗಾ ॥ ೧ ॥ ಮತ್ತೆ ತ್ರಿಪುರಸಂಹಾರಿ । ಚಿತ್ತಜನಯ್ಯನ ಸೇರಿ ॥ ಹಸ್ತದಿ ಶೂಲ ಕಪಾಲಧಾರಿ । ಕರ್ತೃ ಶ್ರೀಹರಿಗೆ ನಿಜವ ತೋರಿ ॥ ೨ ॥ ನಂದಿಗೆ ನರಿಗೆ ಬಾಪ್ಪ ಚಂದ್ರನು ಶಿರದಲ್ಲಿಪ್ಪ ॥ ಇಂದ್ರನ ತೀರ್ಥ ದಡದಲ್ಲಿಪ್ಪ । ಎಂದೆಂದಿಗೆ ನಮ್ಮನ ಪಾಲಿಸುತಿಪ್ಪ ॥ ೩ ॥ ಬೇಡಿದ ವರಗಳನೀವಾ । ಮತ್ತೆ ಬೇಡಿದ ಭಕ್ತರ ಕಾವ ॥ ಜಡೆಯ ಮುರಳ ಶಿರಳು ಭಾವ । ಕೊಂಡಾಡುವರೊಳಗೆಲ್ಲ (ಕೊಂಡಾಡುವದೊಳಗೆಲ್ಲ) ಎನ್ನದು ಶಿವ ॥ ೪ ॥ ಪಾರ್ವತಿ ಪುರದ ನಾಥಾ । ಕರುಣಿಸು ಸಂತತ ದಾತಾ ॥ ನಾರದಪ್ರಿಯ ಪ್ರಖ್ಯಾತಾ । ಪುರಂದರವಿಠಲನ ದೂತಾ ॥ ೫ ॥ ಶ್ರೀ ॥

## ೮. ರಾಗ ಮಧ್ಯಮಾವತಿ, ಆದಿತಾಳ.

ಶಿವದರುಶನ ನಮಗಾಯಿತು ಕೇಳೆ । ಶಿವರಾತ್ರಿಯ ಜಾಗರಣೆ ॥ ಪಲ್ಲ ॥ ಪಾತಾಳಗಂಗೆಯ ಸ್ನಾನವ ಮಾಡಲು । ಪಾತಕವೆಲ್ಲ ಪರಿಹಾರವು ॥ ಜ್ಯೋತಿಲಿಂಗನ ಧ್ಯಾನವ ಮಾಡಲು । ದ್ಯೂತಗಳಿಲ್ಲ ಅನುದಿನವು ॥ ॥ ೧ ॥ ಬೇಡಿದ ವರಗಳ ಕೊಡುವನು ತಾಯಿ । ಬ್ರಹ್ಮನ ರಾಣಿಯ ನೋಡುವನು ॥ ಆಡುತ ಪಾಡುತ ವೇಳಯ ಬಸವನ । ಆನಂದದಲಿ ನಲಿದಾಡುವನು ॥ ೨ ॥ ಶಿಖರವು ಕಂಡೆನು ಪುರಂದರವಿಠಲನ । ಹರಿ ನಾರಾಯಣ ಧ್ಯಾನದಲಿ ॥ ೩ ॥ ಶ್ರೀ ॥

# ಪ್ರಾಣದೇವರ ಸ್ತೋತ್ರ.

## ೯. ರಾಗ ನಾದನಾಮಕ್ರಿಯೆ, ಆದಿತಾಳ.

ಪ್ರಾಣ ನೀನಹುದೊ । ಗುರು ಮುಖ್ಯ । ಪ್ರಾಣ ನೀನಹುದೊ ॥ ಪಲ್ಲ ॥ ಭಾರತಿರಮಣ ನಿನಗೆಣೆ ಕಾಣೆ ಮೂರುಲೋಕದಲ್ಲಿದ್ದಂಥಾ । ಸಕಲ ಪ್ರಾಣದಲಿದ್ದಂಥಾ ಪಂಚಪ್ರಾಣಿಗಳಿಗೆ ಪ್ರಾಣನಾಥಾ ॥ ಅನುಪಲ್ಲ ॥ ಕೊಟ್ಟ ರಾಮಮುದ್ರಿಕೆಯ ಬೆಟ್ಟದಲ್ಲಿ ಸಾಗರ ದಾಟಿ । ಸೀತೆ ಮುಂದಿಟ್ಟು ಕರಕಳು ತಟ್ಟಿಕೊಟ್ಟ ವೀರಹನುಮಾ ॥ ೧ ॥ ಕುಂತಿಸುತ ನೀನಹುದೊ । ಅಸುರರಿಗೆ । ಹಂತಕಾರಿ ನೀನಹುದೊ ॥ ಚಿಂತಿತ ನಮಚರಿತಸಂಗ । ಚಿಂತಿಸುವ ಸಜ್ಜನರ । ಅಂತರಂಗವಾದ ನಮ್ಮ । ಹಂತಕಾರಿ ಶೂರ ಭೀಮಾ ॥ ೨ ॥ ಮುದ್ದುಮುಖದವ ನೀನಹುದೊ । ಮುಜ್ಜಗವನೆ । ಸದ್ಗುಣವಂತ್ಯ ನೀನಹುದೊ ॥ ಮಧ್ವಮತವನೆ ನೀ । ನುದ್ಧರಿಪೆನೆಂದು ಪೀರ । ಬದ್ಧಕಂಕಣ ತೊಟ್ಟ । ಮಧ್ವಮುನಿರಾಯ ಬಲು ॥ ೩ ॥ ಇಂದುವದನ ನೀನಹುದೊ । ಗುರುರಾಯಾ ಆ । ನಂದತೀರ್ಥ ನೀನ ಹುದೊ ॥ ನೊಂದು ಬಂದ ಜನರು । ವಂದಿಸೆ ನಿಮ್ಮ ಚರಣಕಮಲ । ನಂಬಿದಂಥಾ ಭಕ್ತರನ್ನು । ಕುಂದದೆ ಪೊರೆಯುವರಂತೆ ॥ ೪ ॥ ಶೂರ ನೀನಹುದೊ । ವಾಯುಕು । ಮಾರ ನೀನಹುದೊ ॥ ಪರಮ ಯೆನ್ನ

ನಂಜಿ ಬಲು । ಪರಮ ಮಹಿಮನೆ ನಮ್ಮ । ಪುರಂದರವಿಠಲನ ಸೇವಿ
ಸಿದಾ ಕೀರ್ತಿ ಪಡದಾ ॥ ೫ ॥ ಶ್ರೀಃ ॥

## ೧೦. ರಾಗ ಬೇಹಾಗ್, ಅಟತಾಳ.

ಈತ ಮುಖ್ಯಪ್ರಾಣನಾಥ ॥ ಪಲ್ಲ ॥ ಈತ ಶ್ರೀರಾಮಸೇವಕನೆನಿಸಿ
ದಾತ ॥ ಅನುಪಲ್ಲ ॥ ಭಾನುವಿನ ತುಡುಕಿದಾತ ಭಾರತಕೆ ಬಂದಾತ ।
ವಾನರೋತ್ತಮ ಹನುಮ ಹರಿಶರಣನೀತ ॥ ೧ ॥ ವಾರಿಧಿಯ ನೆಗೆದಾತ
ವನಚರಾಗ್ರೇಸರನೀತ । ವಾರಿಜಾಕ್ಷಿಗೆ ಮುದ್ರಿಕೆ ವೈಸಿ ಇತ್ತಾತ ॥ ೨ ॥
ಲಂಕಿಣಿಯ ಗೆಲಿದಾತ ಲಂಕೆಯನು ಉಳ್ಪಿದಾತ । ಪಂಕಜೋದ್ಭವನ
ಪಟ್ಟಭದ್ರನೀತ । ೩ ॥ ವಾನರೋತ್ತಮನೀತ ವಸುಧೆಗೆ ವೆಗ್ಗಳನೀತ ।
ದಾನವಾಂತಕ ಹನುಮ ದಶಪ್ರಮತಿಯಾತ ॥ ೪ ॥ ಸ್ಮರನಂಬು
ಗೆಲಿದಾತ ಶರಣ ಸುಜನರಿಗೆ ದಾತ । ಶಿರಿ ಪುರಂದರವಿಠಲಗೆ ಅಚ್ಚಿನ್ನ
ಭಕ್ತನೀತ ॥ ೫ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೧. ರಾಗ ತೋಡಿ, ರೂಪಕತಾಳ.

ನೆನೆವೆ ನಾನನ್ಯರ ಕಾಣೆನು ॥ ಪಲ್ಲ ॥ ಕೊಡುವರೊಳಗೆ ನೀನೇ
ಯೆಂದು । ಬಡವನಾಗಿ ನಾನು ಬಂದು । ಉಡಿಯ ಪಿಡಿದು ಬೇಡಿ
ಕೊಂಜೆ ನಾ ॥ ಉಡಿಯ ಪಿಡಿದು ಬೇಡಿಕೊಂಜೆ । ವೃಥಧಿ ವರವ
ಕೊಡುವ ಧೊರೆಯೆ ॥ ೧ ॥ ರಾಮದೂತನಾಗಿ ಬಂದು । ನಾಮಮುದ್ರಿಕೆ
ಜಾನಕಿಗಿತ್ತು । ಭೀಮನಾಗಿ ಕರವ ಮುಗಿವನಾ ॥ ಭೀಮನಾಗಿ ಕರವ
ಮುಗಿದು । ಜ್ಞಾನಪೂರ್ಣ ಪ್ರಾಣನೆನಿಪನ ॥ ೨ ॥ ಈಶ ನಾರಸಿಂಹ
ನಾದ । ವಾಸವಾದಿ ವಿನುತ ಶೇಷ । ದೋಷರಹಿತ ಪುರಂದರನಾ ॥
ದೋಷರಹಿತ ಪುರಂದರವಿಠಲ । ದಾಸ ಭಾರತೀಶ ॥ ೩ ॥ ಶ್ರೀಃ ॥

## ೧೨. ರಾಗ ಬೇಹಾಗ್, ಛಾಪುತಾಳ.

ಹೊಂತಕಾರಿ ನೀನೇವೆ ಎಂತೋ ಹನುಮಂತರಾಯಾ ॥ ಪಲ್ಲ ॥ ಶಾಂ
ತ ಅತಿಬಲವಂತ ರಂತವಿದೂರ ಶಾಂತ ದಾಂತ ಸುರಕಾಂತ ಹಂತ ।

ವೇದಾಂತ ದೈತ್ಯಹಂತ ವಾದದು । ರಂತನುತ ನಿಯಂತ ಯುಕ್ತಿವಂತ ॥ ಅನುಪಲ್ಲ ॥ ಸಾಗರವನು ಬಲು ವೇಗದಿಂದಲಿ ದಾಟಿ । ಬೇಗ ಲಂಕೆಗೆ ಪೋಗಿ ಆಗ ಬಂದ ದೈತ್ಯರ ನೀಗಾಡಿ । ಸಂಗರವಾಗಿ ಉಂಗುರವ ಸೀತಾಂಗನೆಗೆ ಕಪಿಪುಂಗವೇಂದ್ರ ನೀಡಿ । ಸಂಗಡ ಪೋಗಾಡಿ ನಗರವು ನೋಡಿ । ಸುಟ್ಟು ಬೂದಿಮಾಡ್ದ ॥ ೧ ॥ ತಾಮರಸಬಂಧು ನೇಮಾವಂಶ ವಾರಿಧಿಸೋಮ । ನಾದ ಶ್ರೀಸೀತಾರಾಮ ಪಾದಪಂಕಜ ಧಾಮ । ಸೋಮಜರಾಮ ಕೋಮಲಾಂಗ ವರನಾಮ । ಭೂಮ ಗುಣಧಾಮ । ನರವೃಗೇಂದ್ರ । ಜಲಧಿಚಂದ್ರ । ಸುಗುಣಸಾಂದ್ರ ಸುರವರೇಂದ್ರ ॥ ೨ ॥ ವೀರರ ಗೆಲಿದತಿ ಶೂರ ಪೋರು ಸನ್ನಿತ ಧೀರ । ಜಗನ್ನಾಥ ಪುರಂದರವಿಠಲನ ಪುರವರ ಉರದಲ್ಲಿದ್ದ ಧೀರ । ಕರುಣಾಕರ ಘೋರದೈತ್ಯನಿವಾರ । ಶೂರವರ ಚಾರು ನೇಡಿದ ವೀರ । ದುರಿತವಾರ ಶರಣ ಶೂರ । ವೀರಾದಿವೀರ ॥ ೩ ॥ ಶ್ರೀ ॥

## ಲಕ್ಷ್ಮೀಸ್ತೋತ್ರ.

### ೧೩. ರಾಗ ಗಮನಕ್ರಿಯ, ಮಟ್ಟೆತಾಳ.

ನೀನೇ ಗತಿ ಯೆನಗೆ ವನಜನೇತ್ರೆ ॥ ಪಲ್ಲ ॥ ಕೈಲಾಸ ಎಂಬೋದು ಕಣ್ಣಿಲಿ ಕಾಣೆ । ವೈಕುಂಠವಾಹನಪಿತ ಎತ್ತ ಪೋದನೊ ಕಾಣೆ ॥ ೧ ॥ ಸತ್ಯಲೋಕವೆಂಬೊದು ಮಿಥ್ಯವಾಗಿತು ಕಾಣೆ । ಎತ್ತ ಪೋದನು ಬ್ರಹ್ಮ ಏನು ಮಾಡಲಿ ಅಮ್ಮ ॥ ೨ ॥ ಸರಸಿಜನಾಭನು ಶರಧಿಯೊಳ್ಮುಳುಗಿದ ಪುರಂದರವಿಠಲನ ಕರುಣಕ್ಕೆ ಪಾತ್ರಳೆ ॥ ೩ ॥ ಶ್ರೀ ॥

## ಹರಿಹರಸ್ತೋತ್ರ.

### ೧೪. ರಾಗ ಮುಖಾರಿ, ಆದಿತಾಳ.

ಕಾರುಣ್ಯಮೂರುತಿಯೆ ಕಂಗಳು ಮೂರುಳ್ಳ ಧೊರೆಯೆ ॥ ಪಲ್ಲ ॥ ಧಾರುಣಿಯೊಳು ನಿಮಗೆಣೆಯೇ ಗುರು ದೇವ ಶಿಖಾಮಣಿಯೇ ।

॥ ಅನುಪಲ್ಲ ॥ ಗುಹಾಸುರಮರ್ದನನೆ ದೇವ ಖಗ ವೃಷವಾಹನನೆ । ಗಜಚರ್ಮ ಪೀತಾಂಬರನೆ ಮಹಾದೇವ ಮಾಧವನೆ ॥ ೧ ॥ ತ್ರಿಪುರಾ ಪಳಿಸಂಹಾರನೆ ತ್ರೈಲೋಕಪಾವನನೆ । ಅಪಾರಮಹಿಮನೆ ಪ್ರಸನ್ನ ಶ್ರೀ ಹರಿಹರನೆ ॥ ೨ ॥ ತುಂಗಭದ್ರ ವಡಿಯ ತಾಳಿಪೆ ಗಂಗೆಯ ಜೆಡೆಯ ಪುರಂದರವಿಠಲನ ಪ್ರಿಯಾ ನೀ ಸಲಹಯ್ಯಾ ಎನ್ನೊಡೆಯಾ ॥ ೩ ॥

## ೧೫. ರಾಗ ಉದಯ, ಝಾಪುತಾಳ.

ಅಚ್ಯುತಾನಂತ ಗೋವಿಂದನೆಂಬ ವಸ್ತು ಎನ್ನ ಕೈಸೇರಿತು ॥ ಪಲ್ಲ ॥ ಎಷ್ಟು ಪುಣ್ಯವ ಮಾಡಿದೆನೊ ಪರವಸ್ತು ಎನ್ನ ಕೈಸೇರಿತು ॥ ಅನುಪಲ್ಲ ॥ ವೆಚ್ಚವ ಮಾಡಲಾಗದು ಇದು ಮುಚ್ಚಿ ಬಚ್ಚಿಡಲಾಗದು । ಹೊತ್ತರೆದ್ದು ಕೀರ್ತನೆಮಾಡುವ ವಸ್ತು ಎನ್ನ ಕೈಯ ಸೇರಿತು ॥ ೧ ॥ ಕ್ಷೀರಸಾಗರ ದವ್ರೃತವ ತಂದ ಕಾಮಧೇನು ಕೈಯ ಸೇರಿತು । ನೀಲವರ್ಣನಾದ ಪಾಲಿಪ ಹೊಸ ದಿವ್ಯ ನೀಲಮಾಣಿಕ್ಯ ಕೈಯ ಸೇರಿತು ॥ ೨ ॥ ಸುರ ಮುನಿಗಳು ಕೂಡಲು ಇದು ಹರಳಿಗೆ ಬೆಲೆಯಾಗದು । ವರದ ಪುರಂದ ರವಿಠಲರಾಯನೆಂಬ ವಡವೆ ಎನ್ನ ಕೈಯ ಸೇರಿತು ॥ ೩ ॥ ಶ್ರೀ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೬. ರಾಗ ಬಿಲಹರಿ, ಝಂಪೆತಾಳ.

ಏನು ಮಾಡಲಿ ಮಗುವಿಗೆ ಏನಾಯಿತೇ । ಇದರಾಗಮವ ಬಲ್ಲವರು ತಿಳಿದು ಪೇಳಿ ॥ ಪಲ್ಲ ॥ ತೂಗಿ ಮಲಗಿಸಿದರೆ ಕಣ್ಣು ಮುಚ್ಚಲೊಲ್ಲನು ಬೆನ್ನ ಮೇಲಿನ ಬುಕಟಿ ಕಲ್ಲ ಅರಿಯಾಗಿದೆ ॥ ರೋಗವಿದೇನು ಬಾಡ ಯಲಿ ನೀರು ಇಳಿವುತದೆ । ಕೂಗುವ ಧ್ವನಿ ಒಮ್ಮೆ ಕುಂದದಿತು ॥ ೧ ॥ ಕಂಡ ಸಕ್ಕರೆ ಹಾಲು ಉಣಕೊಟ್ಟರೊಲ್ಲದೆ । ಮಣ್ಣು ಹೆಂಟೆ ಬೇಡಿದ ಕೈಯಲ್ಯಾಗೆ ಯೇನು ಕೊಡಲಿ ॥ ಮುಂಡೆ ಜಡೆಕಟ್ಟಿತಿನ್ನೇನು ಮಾಡಲಿ ಇದಕ್ಕೆ । ಹಿಂಡು ಸತಿಯರ ಸಂಗ ಘನಘನವಾಯಿತು ॥ ೨ ॥ ಮಾಲಿ ಯನು ತೆಗದು ಮೈಮುರುದುಟ್ಟು ನಗುತಿದೆ । ಕಲಿಕಿತನದಲ್ಲಿ ಎಷ್ಟು

ಕಾಡುತಾನೆ ॥ ನೆಲೆಯು ಬಲ್ಲವರು ಕಾಣೆ ಧರೆಯೊಳಗೆ । ಚಲುವ ಶ್ರೀ ಪುರಂದರವಿಠಲ ಒಬ್ಬನೇ ಬಲ್ಲ ॥ ೩ ॥ ಶ್ರೀ ॥

## ೧೭. ರಾಗ ಶಂಕರಾಭರಣ, ತಾಳ.

ಎಲ್ಲೆಲ್ಲಿ ಆಡಿಬಂದೆ ಹೇಳಯ್ಯ ರಂಗ । ನಿಲ್ಲೊ ನಿಲ್ಲೊ ತಾಳೊ ತಾಳೊ ಗೋವಿಂದ ॥ ಪಲ್ಲ ॥ ಮುಖದಲ್ಲಿ ಕಿರಿಜೆವರಿಟ್ಟದೆ । ಹೊಸಹೊಸ ಪರಿ ಸುದ್ದೀ ಹುಟ್ಯದೆ । ನಸುನಗುವೆಲ್ಲ ನಿನ್ನ ಕೀರ್ತಿ ಹೆಚ್ಯದೆ ॥ ೧ ॥ ಕೈಯಲ್ಲಿ ಉಂಗುರ ಎಲ್ಲಿ ಹೋಗ್ಯದೆ । ನಿನ್ನ ಬದುಕೆಲ್ಲ ಅವಳಿಗೆ ಸಾಗ್ಯದೆ । ಅಲ್ಲ ಅವಳ ಮಹಿಮೆ ಹೀಂಗ್ಯದೆ ॥ ೨ ॥ ನಿನ್ನ ಕಳವು ನಾನು ಎಷ್ಟೆಂತು ಹೇಳಲಿ ಕಡೆಯಿಂದ ಕಡಿಗೆ ತಾಳಿದೆ । ಕಡಿಗೆಲ್ಲ ಹರುಷ ತೋರ್ಯದೆ । ಪುರಂದರವಿಠಲ ನಿನಗೆ ನನಗೆ ಹೀಂಗಾಗ್ಯದೆ ॥ ೩ ॥ ಶ್ರೀ ॥

## ೧೮. ರಾಗ ಕೇದಾರಗೌಳ, ಮಟ್ಟೆತಾಳ.

ಅಭಿಮಾನವ್ಯಾಕೆ ಸ್ತ್ರೀಯರಲ್ಲಿ ॥ ಪಲ್ಲ ॥ ಭಂಡತನ ಮಾಡೋರು ತುಂಡುಮುಂಡೇರು ॥ ಅನುಪಲ್ಲ ॥ ಒಡೆತಾನ ಬರುವಾಗ ತನ್ನ ಪತಿ ಮನೆ ಕಂಡು ಚಲುವ ಚೆನ್ನಿಗನೆಂದು ಪೊಗಳುವೊರೊ ॥ ಬಡತನವು ಬಂದು ತಾ ಕಾಡುವೊ ವೇಳೆಯಲಿ । ಮುದಿಯನ ಕೈಹಿಡಿದು ಕೆಟ್ಟೆನೆಂಬೋರೊ ॥ ೧ ॥ ಅರುಣ ಉದಯದಲೆದ್ದು ಮನೆಮನೆಗಳನೆ ತಿರುಗಿ । ಮನದಲ್ಲಿ ಮನೆವಾರ್ತೆ ಸೃಜಿಸುವರೊ ॥ ಎದೆಯ ಮೇಲಿನ ಸೆರಗು ಕಡಿವಾಳಪಂಥಾಕಿ । ತುಡುಗತನ ಮಾಡೋರು ತುರುಕಮುಂಡೇರು । ॥ ೨ ॥ ಈ ಮನೆಯ ಜಗಳವನು ಆ ಮನೆಗೆ ಹೇಳಿ । ಆ ಮನೆಯ ಜಗಳವನು ಈ ಮನೆಗೆ ತಂದು ॥ ಅವರಿವರು ಹೊಡದಾಡಿ ಕಡದಾಡೊ ವೇಳೆಯಲಿ । ಅರಿಯದಂತಿಹರು ಅಲ್ಪಮುಂಡೇರು ॥ ೩ ॥ ಉದಯ ಕಾಲದಲೆದ್ದು ಹರಿಯ ಸ್ಮರಣೆಯನು ಮಾಡಿ । ಪರಲೋಕ ಸಾಧನವ ಪಡದುಕೊಳ್ಳಿರೇ ॥ ಪರಮಪುರುಷ ನಮ್ಮ ಪುರಂದರವಿಠಲನ್ನ । ಮರೆಯದೆ ಭಜಿಸಿರೇ ಮೂಢಮುಂಡೇರಾ ॥ ೪ ॥ ಶ್ರೀ ॥

## ೧೯. ರಾಗ ಮುಖಾರಿ, ಅಟತಾಳ.

ಆಚಾರಿಯರೆಂಬವರ ಇವರ ನೋಡಿ ॥ ಪಲ್ಲ ॥ ಆಚಾರ ಬಲ್ಲವರೇ ಆಚಾರು ॥ ಅನುಪಲ್ಲ ॥ ಆ ಯೆಂದರೆ ಅತಿ ತತ್ವವ ತಿಳಿದವರು । ಅದ್ವೈತ ಮತ ಧ್ವಂಸಮಾಡುವರು ॥ ಅತಿಥಿ ಅಭ್ಯಾಗತರಿಗೆ ಅನ್ನವನ್ನೆ ಇಕ್ಕುವರು । ಅಯುತ ವೃತ್ತಿಯನೆ ಮಾಡುವರು ॥ ೧ ॥ ಚಾ ಯೆಂದರೆ ಚಂಚಲಾತ್ಮವನೆ ತಿಳಿವವರು । ಚನ್ನಾಗಿ ವೇದಶಾಸ್ತ್ರವನೆ ಓದಿದವರು ॥ ಚಲನೆಯಿಲ್ಲದೆ ಗುರುಹಿರಿಯರಿಗೆ ಯೆರಗುವರು ಧ್ಯಾನಸ ಬಿಟ್ಟವರು ಆಚಾರಿಯರು ॥ ೨ ॥ ರು ಯೆಂದರೆ ಋಣವ ಮಾಡದಿದ್ದವರು । ರಿಪುಮಿತ್ರ ಸಮರೆಂದು ನೋಡುವರು ॥ ರೌಪ್ಯ ಸೌವರ್ಣವನು ವೃತ್ತಿಕೆಯೆಂದು ನೋಡುವರು । ರಮಾಧವ ಪುರಂದರವಿಠಲನ ಬಲ್ಲವರೇ ಆಚಾರು ॥ ೩ ॥ ಶ್ರೀಃ ॥

## ೨೦. ರಾಗ ಧನ್ಯಾಸಿ, ಆದಿತಾಳ.

ಆಡಿಸು ನೀ ಬಾರೊ ಹರಗೋಲನ್ನಾಕಿಸು ನೀ ಬಾರೊ ॥ ಪಲ್ಲ ॥ ಮಿತ್ರೇ ವಾಡಿದ ಮಾತನು ಕೇಳಿ ಶ್ರೀಕೃಷ್ಣನು ತಾ ಬಂದ ॥ ಅನುಪಲ್ಲ ॥ ಹುಟ್ಟನೆ ತೆಗದು ಹೆಗಲಲ್ಲಿಟ್ಟು ಥಟ್ಟನೆ ಕೈಕೊಟ್ಟ । ನೀರು ತುಂಬಿತು ನಾವಿಯೊಳಗೆ ಕೇಳೊ ಅಂಬಿಗನೆ ॥ ತಡಮಾಡದಲೆ ದಡದಲಿ ಸೇರಿಸು ನಡಿ ನಡಿ ಅಂಬಿಗನೆ । ಏನು ಮಾಡಲಿ ಮಾನಿನಿಯರನ್ನೆ ಸೋತವು ಕೈಯೆಲ್ಲ ॥ ೧ ॥ ನೀರು ಪೊಳಗೆ ಸೆಳದು ಸೆಳದು ಸೋಲಿತು ಮೈಯೆಲ್ಲ । ಇನ್ನಾದರೂ ನೀವು ನೀರೊಳು ಕರಗಳು ಹಾಕಿ ಸಾಗಿಸಿರೆ ॥ ನಿಮ್ಮ ದೇವರಿಗೆಲ್ಲ ಹರಿಕೆ ಹರಿಸಿ ಬೇಡಿಕೊಳ್ಳಿರೆ । ವಡವೆ ವಸ್ತುವು ಬೇಡಿದ್ದು ಕೊಡುವೇವು ಹಿಡಿ ಹಿಡಿ ಅಂಬಿಗನೆ ॥ ೨ ॥ ನಗನಾಣ್ಯಗಳು ಯಾರಿಗೆ ಬೇಕೆ ನಗೆಯು ಬರುತದೆನಗೆ । ನಾರಿ ನೀವೆಲ್ಲರು ತೊಟ್ಟ ಕಂಚುಕ ಬಿಚ್ಚಿ ನೀರೊಳಗ್ಹಾಕಿರೆ ॥ ಯಾತಕೆ ಬಂದೇವು ಈತನ ಸಂಗತಿ ಎಂದೆಂದಿಗ್ಯು ಸಾಕು । ದಾಸಿಯರೆಲ್ಲರು ನಿಮ್ಮವರೆಂದೂ ಕೇಳೊ ಗುಣಸಿಂಧು ॥ ೩ ॥ ಬಾ ಬಾ ಎನುತಲಿ ಬಣ್ಣಿಸಿ ನಿಮ್ಮನು ಕರೆದವರು ಯಾರೆ । ನಾರಿ ನಿಮ್ಮ ಪ್ರಾಣ

ಉಳಿಯಬೇಕಾದರೆ ಶೀರೆ ಬಿಚ್ಚಿ ತಾರೆ ॥ ಕೊಟ್ಟರು ಕೈಯಲ್ಲಿ ನಾಚುತ ಕಣ್ಣನು ಮುಚ್ಚಿಕೊಂಡರು ಬೇಗ ॥ ೪ ॥ ಹೆಣ್ಣುಗಳೇ ನೀವು ಮುಚ್ಚಲಿ ಬೇಡಿ ಸಣ್ಣಗಳಾ ಕೇಳಿ । ಸಣ್ಣ ಕುಪ್ಪಸವಿದು ಛಿದ್ರಕೆ ಸಾಲದು ಕಣ್ಣು ಬಿಟ್ಟು ನೋಡಿರೆಂದ ॥ ನಾರಿಯರೆಲ್ಲರು ನಾಚುತ ಶಿರಗಳು ಬಾಗಿ ಕುಳಿತರವರು । ಉವಧಿಶಯನ ಶಿರಿ ಪುರಂದರವಿಠಲ ವಸ್ತ್ರವ ಕೊಟ್ಟನು ಕರುಣದಲಿ ॥ ೫ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ✓೨೧. ರಾಗ ಕಾಂಬೋಧಿ, ರೂಪಕತಾಳ.

ಶ್ರೀವನಾವನು ಕ್ಯಾವ ಅವನಿಯೊಳಗೆ ॥ ಪಲ್ಲ ॥ ಜೀವರಿಗೆ ಧಾತೃ ಶ್ರೀಹರಿ ಅಲ್ಲದೆ ॥ ಅನುಪಲ್ಲ ॥ ಆವ ತಂದೆಗಳು ಸಲಹಿದರು ಪ್ರಹ್ಲಾದನ್ನ । ಆವ ತಾಯಿಗಳು ಸಲಹಿದರು ಧ್ರುವನ್ನ ॥ ಆವ ಸೋದರರು ಈರಡಿಸಿದರು ವಿಭೀಷಣನ್ನ । ಜೀವರಿಗೆ ಧಾತೃ ಶ್ರೀಹರಿಯಲ್ಲದೆ ॥ ೧ ॥ ಆವ ಬಂಧುಗಳು ಸಲಹಿದರು ಗಜರಾಜನ್ನ । ಆವ ಪತಿಯಾದ ದ್ರೌಪದಿ ಕಾಲಕ್ಕೆ ॥ ಆವಾವ ಸಖನಾದ ಪಾಂಡವರ ಸಮಯಕ್ಕೆ । ಜೀವರಿಗೆ ಧಾತೃ ಶ್ರೀಹರಿಯಲ್ಲದೆ ॥ ೨ ॥ ಆವನಾಧಾರ ಅಡವಿಯೊಳಿದ್ದ ಮೃಗಗಳಿಗೆ । ಆವ ಪೋಷಕ ಗರ್ಭದ ಶಿಶುವಿಗೆ ॥ ಆವ ಪಾಲಿಪ ಪಕ್ಷಿ ಪಶು ಮುಖ್ಯ ಜೀವರಿಗೆ । ದೇವ ಶ್ರೀಪುರಂದವಿಠಲನಲ್ಲದೆ ॥ ೩ ॥ ಶ್ರೀಃ ।

## ೨೨. ರಾಗ ಪುನ್ನಾಗವರಾಳಿ, ಝಂಪೆತಾಳ.

ಇನ್ನಾದರು ನಿನಗೆ ನೀನು ತಿಳಿಯದೆ ಇಂಥ । ಅನ್ಯಾಯವುಂಟೆ ಹೇಳೊ ಆತ್ಮಾ ॥ ಪಲ್ಲ ॥ ಚನ್ನಾಗಿ ಕಂಡು ತಿಳಿದು ಚರಿಸುವರೆ ತಿರುಗಿ ತಿರುಗಿ । ಬಿನ್ನಾಣ ಬೇಡ ಕಂಡ್ಯಾ ಆತ್ಮಾ ॥ ಅನುಪಲ್ಲ ॥ ಎಷ್ಟು ಜನ್ಮವ ಪಡದೆ ಎಷ್ಟು ಬಸುರಲಿ ಬಂದೆ ಎಷ್ಟು ತನುವಾಗಿ ಬೆಳದೆ ಆತ್ಮಾ । ಎಷ್ಟು ಮೊಲೆ ಪಾಲುಂಡೆ ಎಷ್ಟು ದೇಶದಲಿದ್ದೆ ಎಷ್ಟು ಸತಿಸುತರ ಪಡದೆ ಆತ್ಮಾ ॥ ಎಷ್ಟು ಶಿಶುವೆಂದೆನಿಸಿಕೊಂಡು ಮೆರದೆ ಎಷ್ಟು ಬನ್ನವ ತಾಳಿದೆ ಆತ್ಮಾ । ಎಷ್ಟು ಬಂಧುಗಳೊಡನೆ ಎಲ್ಲೆಲ್ಲಿ ಬಂದು ಬೆರದೆ ಎಷ್ಟು ಗುಣದವರ ನೋಡೋ

ಆತ್ಮಾ ॥ ೧ ॥ ಎಲುವುಗಳನು ಕಡದು ಎಂಭತ್ತನಾಲ್ಕು ಕೀಲುಗಳು ಬಲು ನರಂಗಳಲಿ ಬಿಗಿದು ಆತ್ಮಾ । ನೆಲೆ ರಕ್ತ ಮಾಂಸದಲಿ ನೆರಪಿ ಚರ್ಮವ ತೊಡಿಸಿ ಬಲು ಬೊಂಬೆಯಾದಿಯಲ್ಲೋ ಆತ್ಮಾ ॥ ಮಲ ಮೂತ್ರ ಪೂರಿತದ ಮನೆಬಾಗಿಲೊಂಭತ್ತು ಬಳಿಕ ಕೊಂಡಿಪ್ಪಿಯಲ್ಲೋ ಆತ್ಮಾ । ಬಲವಂತನೆನಿಸುವರು ಪಂಚಭೂತಗಳಿಂದ ಬೆಲೆಗ್ಹೈವ ದೇಹ ಕಂಡ್ಯಾ ಆತ್ಮಾ ॥ ೨ ॥ ಮೂಪನೆರದ ಬಂಡಿ ಹೊಲನ್ಯಾರದೆಂಬುವದು ಮೂರುಗುಣದವರ ನೋಡೋ ಆತ್ಮಾ । ತಾವರದ ಅಷ್ಟಮದ ಜವಿಯಲಿ ಪೋಪುವದು ಭಾವದವರ ನೋಡೋ ಆತ್ಮಾ ॥ ಭಾವರದ ಷಡ್ವರ್ಗ ಘಾತಕ ಕೊಂಪೆಯಿದು ತಾವೆನಿಸಿಕೊಂಬುದಲ್ಲೋ ಆತ್ಮಾ । ಭಾವಜನ ಕಲ ನೆಲೆಯ ಬಿಟ್ಟರು ಹದಿನಾರು ಮಂದಿ ಪಾರಿಯಾರಿರರು ಕಂಡ್ಯಾ ಆತ್ಮಾ ॥ ೩ ॥ ಆಡಿ ತಪ್ಪಲುಬೇಡ ನೋಡಿ ಕೊಡದಿರಬೇಡ ಬೇಡಿದರೆ ಕಾಡಬೇಡ ಆತ್ಮಾ । ಚಾಡಿಚುಡಿತಗಳಾಡಿ ಸಲೆ ಪಂಥಗಳನಾಡಿ ಕೆಡಕನೀನಾಗಬೇಡ ಆತ್ಮಾ ॥ ಆಡಿ ಹಲವರ ಜರಿದು ಹಗರಣಕೆ ಗುರಿಮಾಡಿ ಆಡಿ ಹಮ್ಮಿಸಬೇಡ ಆತ್ಮಾ । ನೆಡಿಗೆಂಡದಿನನಾಗಿ ನಂಬಿದರೆ ಸಲಹಸೆ ನರಕರಹಸಾಗಬೇಡಾ ಆತ್ಮಾ ॥ ೪ ॥ ನೆಚ್ಚದಿರು ಈ ಒಡಲ ನೆಚ್ಚದಿರು ಈ ದಾಬಲವ ನೆಚ್ಚದಿರು ಈ ಶಿರಿಯನು ಆತ್ಮಾ । ಹೆಚ್ಚದಿರು ಉಬ್ಬಿನಲಿ ಹೆಚ್ಚದಿರು ಕೊಬ್ಬಿನಲಿ ಹೆಚ್ಚದಿರು ಕ್ರೂರದಲಿ ಆತ್ಮಾ ॥ ಕಚ್ಚದಿರು ಎಲ್ಲರಲಿ ಕಚ್ಚದಿರು ಬಲ್ಲರಲಿ ಕಚ್ಚದಿರು ಶ್ವಾನನಂತೆ ಆತ್ಮಾ । ಬೆಚ್ಚದಿರು ವೃಥದಲ್ಲಿ ಬೆಚ್ಚದಿಂದ್ರಿಯಗಳಲಿ ಬೆಚ್ಚದಿರು ಚಿತ್ತದಲ್ಲಿ ಆತ್ಮಾ ॥ ೫ ॥ ವೇದ ಶ್ರುತಿಗಳ ಕೇಳು ಓದು ರಾಮಾಯಣವ ಭೇದಿಸು ಭಾಷಿತವನು ಆತ್ಮಾ । ಆದಿಗುರುಹಿರಿಯರಲ್ಲಿ ಅಧಿಕ ಬುದ್ಧಿಯ ಕೊಡು ಆಗಮಪ ತಿಳಿದು ಬಾಳು ಆತ್ಮಾ ॥ ಕದ್ದ ಕಳ್ಳನ ಹಿಡಿವ ಕಪಟ ಕಾಮನ ಗೆಲಿಪ ಗಾಯಕನ ಚಿಂತೆಮಾಡು ಆತ್ಮಾ । ಕಾದ ಹಾಲಿನ ತೆರದಿ ಕಲ್ಮಷವ ಕಳದು ಉಪಕಾರ ಜೀವನಾಗೋ ಆತ್ಮಾ ॥ ೬ ॥ ದೇಶ ಮೋಹ ಚಿಂತನೆಯ ವಶವೃತ್ತಿ ವಳಗಾಗಿ ಅಸುರ ನೀನಾಗಬೇಡ ಆತ್ಮಾ । ಶಶಿಮುಖಿಯರೆನಿಪ ಪರಸ್ತ್ರೀಯರಲಿ ಕಣ್ಣಿಟ್ಟು ಪಶು ಪಕ್ಷಿ ಆಗಬೇಡ ಆತ್ಮಾ ।

ಪುಸಿಯು ಸಂಸಾರ ಸಂಭೋಗದತಿಶಯದ ಕೊಬ್ಬಿನಲ್ಲಿ ನೀ ಸದಾ ದೈನ್ಯನಾಗಬೇಡ ಆತ್ಮಾ। ಹಸನಾದ ನರಜನ್ಮ ಹಲವು ಜನ್ಮದಿ ಜನಿಸಿ ದೆಶೆಗೆಟ್ಟು ತಿರುಗಬೇಡ ಆತ್ಮಾ॥ ೭ ॥ ಸತ್ಯವೆಂಬದು ದೊಡ್ಡ ಸಾಮ್ರಾಜ್ಯ ಪದವಿಯಲಿ ನಿತ್ಯ ವಾಲಗವ ಮಾಡೋ ಆತ್ಮಾ। ಅತ್ಯಧಿಕ ಫಲವೀವ ಅನ್ನದಾನಗಳಲ್ಲಿ ಮೃತ್ಯುಭಯವೆಲ್ಲ ನೂಕೋ ಆತ್ಮಾ॥ ಮುತ್ತು ಇಲ್ಲದ ರತ್ನ ಮೂರಂತರಂಗದಲಿ ಮೂವ್ವದೊಡೆಯನ ಪೂಜಿಸೋ ಆತ್ಮಾ। ಕತ್ತಲೆಯ ಕಳಕಳದ ಘನಪಾರಗಳನೆಲ್ಲಲೊತ್ತಿ ನಿಜ ಬೆಳಕ ನೋಡೋ ಆತ್ಮಾ ॥ ೮ ॥ ಕುಲಗೋತ್ರವೊಂದಾಗೊ ನೆಲಸೂತ್ರನೊಂದಾಗೊ ಸಲಹು ಗುಣಸಾಂದ್ರನಾಗೋ ಆತ್ಮಾ। ಬಲುವೀರ ಶೂರನಾಗೋ ಭಾಗವತ ನೀನಾಗೊ ಪರಮ ಪುಣ್ಯಾತ್ಮನಾಗೋ ಆತ್ಮಾ ॥ ಚಲುವ ಗುರು ಮಧ್ವಪತಿ ಶ್ರೀಲಕ್ಷ್ಮೀಕೃಪೆಯಿಂದ ಶಾವಕನೆ ಶೀಲನಾಗೋ ಆತ್ಮಾ। ಇಳೆಯೊಳಗೆ ಪುರಂದರವಿಠಲನಂಘ್ರಿಗಳ ಭಜಿಸಿ ಎಡೆಬಿಡದೆ ದಾಸನಾಗೋ ಆತ್ಮಾ॥ ೯ ॥ ಶ್ರೀಃ ॥

## ೨೩. ರಾಗ ನಾದನಾಮಕ್ರಿಯೆ, ಝಾಪುತಾಳ.

ಇರಬೇಕು ಇಲ್ಲದಿರಬೇಕು ॥ ಪಲ್ಲ ॥ ಹರಿದಾಸರು ಸಂಸಾರದೊಳಗೆ ॥ ಅನುಪಲ್ಲ ॥ ಮಕ್ಕಳು ಮತಿವಂತರಾದರೆ ಮನೆಯಲ್ಲಿ। ಅಕ್ಕರದಿಂದಲಿ ಕೂಡಿರಬೇಕು॥ ಚಿಕ್ಕವನ ಬುದ್ಧಿ ಭೇರುಂಡನಾದರೆ। ಘಕ್ಕನವರ ಕೂಡ ಹೊರಗಾಗಬೇಕು ॥ ೧ ॥ ಕುಲಸತಿಯಾದರೆ ಕೂಡಿರಬೇಕು। ಸುಲಭದಿಂದಲಿ ಸ್ವರ್ಗ ಸೂರಾಡಬೇಕು ॥ ಕಲಹಗಂಟೆ ಸತಿ ಕರ್ಕಸಿಯಾದರೆ। ಹಲವು ಪರಿಯಿಂದ ಹೊರಗಾಗಬೇಕು ॥ ೨ ॥ ಹೀನನ ಕಂಡರೆ ಹಿಮ್ಮೆಟ್ಟಬೇಕು। ಜ್ಞಾನಿಗಳ ಕಂಡರೆ ಕೈಮುಗಿಯಬೇಕು ॥ ಸ್ವಾಮಿ ಶ್ರೀಪುರಂದರವಿಠಲರಾಯನ। ನಾನಾ ಬಗೆಯಿಂದ ಕೊಂಡಾಡಬೇಕು ॥ ೩ ॥ ಶ್ರೀಃ ॥

## ೨೪. ರಾಗ ಕಾಂಬೋಧಿ, ಆದಿತಾಳ.

ಇಬ್ಬರ್ಹೆಂಡರ ಸುಖವು ಇಂದು ಕಂಡೆನಯ್ಯ॥ ಪಲ್ಲ ॥ ಅಬ್ಬಬ್ಬ ಎಂದಿಗ್ಯು ಸಾಕು ಸಾಕಯ್ಯ ॥ ಅನುಪಲ್ಲ ॥ ಹಿರಿಯುವಳ ಕೂಡಿಯು ಸರಸನಾಡು

ವೆನೆಂದು । ಇರುಳು ಉಪ್ಪರಿಗೆ ನಾನೇರುತಿರಲು ॥ ಚರಣವೊಬ್ಬಳು ಪಿಡಿದು ಶಿರವನೊಬ್ಬಳು ಪಿಡಿದು । ಸರಸರನೆ ಕೆಳಗೆ ಮೇಲೆಳೆಯುತಿಹರಯ್ಯ ॥ ೧ ॥ ಎರದುಕೊಂಬುವೆನೆಂದು ಎಣ್ಣೆ ಬಿಸಿಮಾಡಿ ನಾ । ಕಿರಿಯವಳ ಗೂಡಿ ವರಸಿಕೊಳುತಿರಲು॥ ಹಿರಿಯವಳು ಮುನಿದು ಬಂದಾಗ ಸೀರಿನ ಗಡಿಗೆ । ವಡದು ನಿರ್ವಾಣದಲಿ ಕುಳ್ಳಿರಿಸಿದಳು ॥ ೨ ॥ ಅಂಗವರ್ಧಭಾಗ ಅನುದಿನದಿ । ಹಿಂಗದೆ ತಾವು ಕೂಡಿ ಒತ್ತುತಿರಲು ॥ ಮಂಗಳಾಂಗ ಶ್ರೀಪುರಂದರವಿಠಲನೆ । ಅಂಗವನು ಮುರಿದು ಮೂಲೆ ಕುಳಿಸಿದರೆನ್ನ ॥ ೩ ॥ ಶ್ರೀಃ ॥

## ✓೨೫. ರಾಗ ಕಾಂಬೋಧಿ, ಝಂಪೆತಾಳ.

ಇಂದ್ರಿಯಂಗಳ ಸುಖವ ನೆಚ್ಚದಿರು ಕಂಡ್ಯ । ಇಂದ್ರಾದಿ ಲೋಕಪ ಪ್ಲವು ಕಾಲ ಕಂಡ್ಯ ॥ ಇಂದಿನಂತಲ್ಲ ಈ ದೇಹ ಕಳೆ ಕಂಡ್ಯ । ಹಿಂದು ಮುಂದಣ ಗತಿಯ ಅರಿತಿಹುದು ಕಂಡ್ಯ ॥ ೧ ॥ ಎಳೆತುಳಸಿ ವನಮಾಲೆ ಧರಿಸಿಕೊಳಬೇಕು । ಘಳಿಲನೆ ಹರಿಯ ಪೂಜಿಸುತಿರಲು ಬೇಕು ॥ ಕಳ ಕಳನೆ ಏಕಮನ ಕರಗುತಿರಬೇಕು । ನಳಿನನಾಭನ ಪಾದ ಪೊಗಳುತಿರಬೇಕು ॥ ೨ ॥ ಹರಿ ಕೃಷ್ಣ ಶರಣೆನ್ನು ಅದು ನಿಮಗೆ ಲೇಸು । ಹರಿಕಥಾಮೃತವನ್ನೆ ಜಗದೊಳಗೆ ಸೂಸು ॥ ಹರಿಭಕ್ತಿಯಿಲ್ಲದವರ ಸಂಗಕ್ಕೆ ಹೇಸು । ಹರಿಯ ಮರೆತರೆ ಮುಂದೆ ನರಕದೊಳಘಾಸು ॥ ೩ ॥ ದುರ್ಜನರ ಮನೆಯೊಳಿಹ ಹಾಲ ಸವಿಗಿಂತ । ಸಜ್ಜನರ ಮನೆಯೊಳಿಹ ನೀರು ಲೇಸೆಂದ ॥ ದುರ್ಜನರ ಸಂಗದೆಡೆ ಕೂಡಿಯಾಟದಕಿಂತ । ಸಜ್ಜನರ ಕೂಡೆ ಕಾದಾಡುವುದೆ ಲೇಸೆಂದ ॥ ೪ ॥ ಹರಿಯನೇ ಅನವರತ ನೆನೆಯುತಿರಬೇಕು । ಕರಗಳಲಿ ಹರಿಯ ಪೂಜಿಸುತಿರಲು ಬೇಕು ॥ ಚರಣಂಗಳಲಿ ಪುಣ್ಯಸ್ಥಳವ ಮೆಟ್ಟಲುಬೇಕು । ಪುರಂದರವಿಠಲನ್ನ ನೆನೆಯುತಿರಬೇಕು ॥ ೫ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ✓೨೬. ರಾಗ ಮುಖಾರಿ, ಅಟತಾಳ.

ಈ ಗ್ರಾಮದಲಿ ವಾಸ ಇರುವೋದೆ ಪ್ರಯಾಸ ॥ ಪಲ್ಲ ॥ ಹೊನ್ನು ಹಣಗಳು ಇಲ್ಲ ಇರುವದಕ್ಕೆ ಸ್ಥಳವಿಲ್ಲ। ತನ್ನವರು ತನಗೆ ಯೆಂಬವರು ಇಲ್ಲ ॥ ಬೆನ್ನು ತೊಕ್ಕಂಬದಕೆ ಮತ್ತೆ ಸೋದರವಿಲ್ಲ। ಇನ್ನಿಲ್ಲಿ ಇಹವಿಲ್ಲ ಪರವಿಲ್ಲವಲ್ಲ ॥ ೧ ॥ ದುಡುಕಿ ಕೆಡುಕನಿಗೂರು ವಡವೆವುಳ್ಳವಗೂರು। ವಡಲಾಸೆಗೆ ತಿರಿಗಿ ತಿಂಬುವಗೆ ಊರು ॥ ಬಿಡದೆ ಪರವಸ್ತುಗಳ ಅಪಹರಿಸುವಗೂರು। ಕಡುಪಾಪಿ ಕಪಟಿಯಾದವರಿಗೀ ವೂರು ॥ ೨ ॥ ಎನ್ನ ಮನದುಬ್ಬಸವ ಆರಿಗೆ ಉಸುರಲೋ ದೇವ। ಚೆನ್ನಕೇಶವ ನಿನ್ನ ಚರಣವನ್ನು ॥ ಇನ್ನು ನಂಬಿದೆನಯ್ಯ ಪುರಂದರವಿಠಲ। ಬಿನ್ನಪವ ನೀ ಕೇಳಿ ಎನ್ನ ಸಲಹಯ್ಯ ॥ ೩ ॥ ಶ್ರೀಃ ॥

## ೨೭. ರಾಗ ದರ್ಬಾರು, ಅಟತಾಳ.

ಈ ತನುವ ನಂಬಲುಬೇಡೋ ಜೀವವೇ ॥ ಪಲ್ಲ ॥ ಅನುವಾಗಿ ನಿನಗಕೆ ಕೆಲಕಾಲ ತೋರುವದೋ। ಅನುವಿಲ್ಲದಾಗ ಈ ತನುವೆ ನಿನಗೆ ವೈರಿ ॥ ಅನುಪಲ್ಲ ॥ ಜರೆಯು ಮರಣದಿಂದ ಭರಿತವಾದದೀ ಕಾಯ। ಸ್ಥಿರವೆಂದು ನಂಬಿ ನೀ ಮರುಳಾಗಬೇಡ ॥ ೧ ॥ ಧನಧಾನ್ಯ ಪಶುಪತ್ನಿ ಸ್ಥಿರವೆಂದು ತಿಳಿದು। ಮನುಮಥನಯ್ಯನ ಮರೆಯದೆ ಮನವೆ ॥ ೨ ॥ ಶರಣೆಂದವರ ಕಾವ ಗರುಡಕೇತನ ನಮ್ಮ। ಪುರಂದರವಿಠಲನ್ನ ಮರೆಯದೆ ಮನವೆ ॥ ೩ ॥ ಶ್ರೀಃ ॥

## ೨೮. ರಾಗ ಹುಸೇನಿ, ರೂಪಕತಾಳ.

ಎನ್ನ ರಕ್ಷಿಸೋ ನೀನು ದೇವರ ದೇವ ॥ ಪಲ್ಲ ॥ ಎನ್ನ ರಕ್ಷಿಸೋ ನೀನು ಯಾದವ ಶಿರೋಮಣಿ। ಮುನ್ನ ದ್ರೌಪದಿಯಭಿಮಾನ ಕಾಯಿದ ಕೃಷ್ಣ ॥ ಅನುಪಲ್ಲ ॥ ಬಾಲನ ಮೊರೆಯನ್ನು ಕೇಳಿ ಕೃಪೆಯಿಂದ। ಪಾಲಿಸಿದ್ಯೋ ನರಸಿಂಹರೂಪದಿಂದಾ ॥ ೧ ॥ ಪಾಷಾಣವ ಚರಣದಿ ಯೋಷಾ ರೂಪವ ಮಾಡಿ। ದೋಷಸಂಹಾರ ನಿರ್ದೋಷ ಗುಣ

ಪೂರ್ಣನೆ ॥ ೨ ॥ ಇನಕುಲಾಂಬುಧಿಚಂದ್ರ ಘನ ಶುಭಗುಣಸಾಂದ್ರ । ಸನಕಾದಿ ಮುನಿವಂದ್ಯ ಪುರಂದರವಿಠಲಾ ॥ ೩ ॥ ಶ್ರೀ ॥

## ೨೯. ರಾಗ ನಾದನಾಮಕ್ರಿಯು, ಝಂಪೆತಾಳ.

ಎಷ್ಟು ಹೇಳಿದರು ನಿನಗೆ ಮತಿಯು ತಿಳಿಯದು ॥ ಪಲ್ಲ ॥ ಘೂಲವಡಿ ನಿನ ಮೋರೆಮೇಲೆ ಧುದಿಯು ಕಣದು ॥ ಅನುಪಲ್ಲ ॥ ದೇಹ ತನ್ನದೆಂದು ಹಿಗ್ಗುವ ದೇಹ ಸಂಗಡ ಬಾರದು । ಗೇಹಕ್ಕೆ ಗೇಹ ಕೂಡಿ ಹೋದರೆ ಹಾಳು ಮನಕ್ಕೆ ಗುರಿಯಾದ್ಯೋ ಲವಡಿ ॥ ೧ ॥ ಹೆಂಡತಿ ತನ್ನವಳೆಂದು ಹಿಗ್ಗುವ ಹೆಂಡತಿ ಸಂಗಡ ಬಾರಳು । ಹೆಂಡತಿ ಮುಂದಕೆ ಸಾಗಿಹೋದರೆ ಲಂಡತನಕೆ ಗುರಿಯಾದ್ಯೋ ಲವಡಿ ॥ ೨ ॥ ದೇಹ ತನ್ನದೆಂದು ಹಿಗ್ಗುವ ದೇಹ ಸಂಗಡ ಬಾರದು । ಗೇಹಕ್ಕೆ ಗೇಹ ಕೂಡಿ ಹೋದರೆ ಪುರಂದರವಿಠಲನ ಮರತ್ಯೋ ಲವಡಿ ॥ ೩ ॥ ಶ್ರೀ ॥

## ೩೦. ರಾಗ ರೇಗುಪ್ತಿ, ಝಂಪೆತಾಳ.

ಏನು ಮಾಡುವದಿಲ್ಲವಮ್ಮಾ । ನಾನಂತು ನೋಡುವದಿಲ್ಲವಮ್ಮಾ ॥ ॥ ಪಲ್ಲ ॥ ನಾನು ಗೋವರಿಗಾಗಿ ಮನೆಮನೆ ಸುಳಿದರೆ । ಮಾನಿನೇರೆಲ್ಲರು ಮೂರುಮಾಡುತ್ತೈದಾರೆ ॥ ಅನುಪಲ್ಲ ॥ ಕಣ್ಣುಮುಚ್ಚಾಟಕೆ ನಾನು । ಅವರ । ಬಣ್ಣದ ಮೋರೆಯಲ್ಲಡಗಿದೇನು ॥ ಸಣ್ಣವನಾಟಕ್ಕೆ ನವನೀತ ಮೆದ್ದರೆ । ಬೆಣ್ಣೆಕಳ್ಳನೆಂದು ಬಾಯಿಮಾಡುತ್ತೈದಾರೆ ॥ ೧ ॥ ವಿಷದ ಚಳಿಗಂಜಿ ಯಶೋದೆ । ನಾ । ಬೆದರಿ ಶೆರಗನೆ ಪಿಡಿದೆ ॥ ಕುಸುರದ ಚೆಂಡೆಂತ ಕುಚಗಳ ಪಿಡಿದರೆ । ಶಶಿಮುಖೇರೆಲ್ಲರು ಸಾರಿದೂರುತ್ತೈದಾರೆ ॥ ೨ ॥ ಗಿಳಿಬಿದ್ದು ಕಂಡು ಬೆದರಿ । ಅವರ । ತೋಳುಗಳ ನಾ ಪಿಡಿದೆ ॥ ಆಲದ ಹಣ್ಣೆಂದು ತುಟಿಗಳ ಸವಿದರೆ । ಬಾಲೆಯೇರೆಲ್ಲ ಬಾಯಿಮಾಡುತ್ತೈದಾರೆ ॥ ೩ ॥ ಹಾವಿನ ಹೆಡೆಗಂಜಿ ಬೆದರಿ । ಅವರ । ನಿರಿಗಳ ನಾ ಪಿಡಿದೆ ॥ ಮಾವಿನ ಹಣ್ಣೆಂದು ಗಲ್ಲವ ಕಡಿದರೆ । ಭಾವೆಯೇರೆಲ್ಲರು ಭಾಳ ದೂರುತ್ತೈದಾರೆ ॥ ೪ ॥ ಗೆಳೆಯರ ಕಂಡು ನಾ ಬಂದೆ । ನಾ ।

ಸುಳಿದೆ ಅವರ ಮನೆಯ ಮುಂದೆ ॥ ಇಳೆಯೊಳು ಪುರಂದರವಿಠಲರಾಯನ । ಪಳಿಕೆ ಬಾಯಿಂದು ವನಿತೆ ಪೂತಿದ್ದಾರೆ ॥ ೫ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೩೧. ರಾಗ ಮೋಹನ, ತ್ರಿಪುಟತಾಳ.

ಏನೇನು ಮಾಡಿದರೇನು ಫಲವಯ್ಯಾ ॥ ಪಲ್ಲ ॥ ಭಾನುಕೋಟಿತೇಜ ಶ್ರೀನಿವಾಸನ್ನ ಭಜಿಸದೇ ॥ ಅನುಪಲ್ಲ ॥ ಹಲವು ಓದಿದರೇನು ಕುಲವು (ಕೆಲವು) ಕೇಳಿದರೇನು । ಜಲದೊಳಗೆ ಮುಳುಗಿ ಕುಳಿತಿದ್ದರೇನು ॥ ಛಲವಾಗಿ ಮುಸುಕಿಟ್ಟು ಬೆರಳನೆಣಿಸಿದರೇನು । ಚಲುವ ದೇವನೊಳು ಯೆರಕಯಿಲ್ಲದ ತನಕ ॥ ೧ ॥ ಅನ್ನವು ಜರಿದು ಅರಣ್ಯ ಚರಿಸಿದರೇನು । ಉನ್ನಂತ ವ್ರತಗಳು ಚರಿಸಿದರೇನು ॥ ಚನ್ನಿಗತ್ತೀರ ಸಂಘ ಬಿಟ್ಟು ಇದ್ದರೇನು । ಗಾನಲೋಲನಲ್ಲಿ ಯೆರಕವಿಲ್ಲದನಕ ॥ ೨ ॥ ಬತ್ತಲೆ ತಿರುಗಿ ಅವಧೂತನೆನಿಸಿದರೇನು । ತತ್ವವಾಕ್ಯಂಗಳು ಪೇಳಿದರೇನು ॥ ಚಿತ್ತಜನಯ್ಯ ಶ್ರೀಪುರಂದರವಿಠಲನ್ನ । ಚಿತ್ತದೊಳಿರಿಸಿ ಒಲಿಸಿಗೊಳ್ಳುವ (ಗೊಳ್ಳದ) ತನಕ ॥ ೩ ॥ ಶ್ರೀಃ ॥

## ೩೨. ರಾಗ ತುಜಾವಂತಿ, ಅಟತಾಳ.

ಕನಸು ಕಂಡೆನೆ ಮನದಲ್ಲಿ ಕಳವಳಗೊಂಡೆನೆ ॥ ಪಲ್ಲ ॥ ಏನು ಹೇಳಲಿ ತಂಗಿ ತಿಮ್ಮಯ್ಯನ ಪಾದವನು ಕಂಡೆ ॥ ಅನುಪಲ್ಲ ॥ ಪೊನ್ನದ ಕಡಗ ಸಿಟ್ಟು । ತಿಮ್ಮಯ್ಯ ತಾ । ಪೊಂಕನಾಮವು ಇಟ್ಟು ॥ ಅಂದಿಗೆ ಘಲುಕೆನ್ನುತ ಯೆನ ಮುಂದೆ । ಬಂದು ನಿಂತಿದ್ದನಲ್ಲೆ ॥ ೧ ॥ ಮಕರಕುಂಡಲ ಸಿಟ್ಟು । ತಿಮ್ಮಯ್ಯ ತಾ । ಕಸ್ತೂರಿತಿಲಕನಿಟ್ಟು ॥ ಗೆಜ್ಜೆ ಘಲುಕೆನುತ ಸ್ವಾಮಿ ತಾ । ಬಂದು ನಿಂತಿದ್ದನಲ್ಲೆ ॥ ೨ ॥ ಮುತ್ತಿನ ಪಲ್ಲಕ್ಕಿ । ಯತಿಗಳು । ಹೊತ್ತು ನಿಂತಿದ್ದರಲ್ಲೆ ॥ ಛತ್ರ ಚಾಮರದಿಂದ ರಂಗಯ್ಯ । ಉತ್ಸವ ಮೂರುತಿಯಾ ॥ ೩ ॥ ತಾಮರ ಕಮಲದಲಿ । ಕೃಷ್ಣಯ್ಯ ತಾ । ಬಂದು ನಿಂತಿದ್ದನಲ್ಲೆ ॥ ವಾಯು ಬೊಮ್ಮಾದಿಗಳು ರಂಗಯ್ಯನ ।

ಸೇವೆಯು ಮಾಡುವರೆ ॥ ೪ ॥ ನವರತ್ನ ತೆತ್ತಿಸಿದ । ಸ್ವಾಮಿ ಯೆನ್ನ । ಹೃದಯಮಂಟಪದಲ್ಲಿ ॥ ಸರ್ವಾಭರಣದಿಂದ ಪುರಂದರ । ವಿಠಲನ ಗೂಡಿದೇನೆ ॥ ೫ ॥ ಶ್ರೀ ॥

## ೩೩. ರಾಗ ಕೇದಾರಗೌಳ, ಝಂಪೆತಾಳ.

ಕೊಟ್ಟ ಸಾಲವ ಕೊಡದೆ ಬಂಡಾಟ ಮಾಡುತಾನೆ ॥ ಪಲ್ಲ ॥ ಎಷ್ಟು ಜೇಡಿವರೆನ್ನ ಪೋಯೆನ್ನುತಾನೆ ॥ ಅನುಪಲ್ಲ ॥ ಭರದಿ ಕೇಳಲು ಜಲದಿ ಕಣ್ಣು ಬಾಯಿ ಬಿಡವುತಾನೆ । ತರುಬಿ ಕೇಳಲು ಕಲ್ಲು ಪೊತ್ತೈತಾನೆ ॥ ಉರುಬಿ ಕೇಳಲು ಊರು ಅಡವಿಯೊಳಗಿರುತಾನೆ । ಇರುಳು ಹಗಲಲ್ಲಿ ಕಾಣಿಸಿಕೊಳ್ಳುತಾನೆ ॥ ೧ ॥ ಕಂಡು ನಿಲ್ಲಿಸಲೆಂದು ಕಾಲಿನಲ್ಲಿ ನಿಲ್ಲುತಾನೆ। ಕೊಂಡ ಸಾಲಕೆ ಕೊಡಲಿ ಪಿಡಿವುತಾನೆ ॥ ಉಂಡರಾಸೆಯೆನಲು ಉಪವಾಸವೈಥಾನೆ । ಭಂಡುತನದಲಿ ಠಕ್ಕು ನಡಿಸ್ಯಾಡುತಾನೆ ॥ ೨ ॥ ಕೆಟ್ಟ ಬೈಯ್ಯಲು ಲಜ್ಜೆ ಹ್ಯಾವವನು ತೊರವುತಾನೆ । ಕೊಟ್ಟು ಹೋಗೆನಲು ಕಲಿಯಾಗುತಾನೆ ॥ ಸೃಷ್ಟಿಗೊಡೆಯ ಶ್ರೀರಂಗಪಟ್ಟಣದ ಪುರಂದರ । ವಿಠಲೇಶನು ನಮ್ಮ ಪಶ್ಚಿಮದ ರಂಗನಾಥಾ ॥ ೩ ॥ ಶ್ರೀ ॥

## ೩೪. ರಾಗ ಸುರುಟಿ, ಆದಿತಾಳ.

ಕೊಡುವ ಕರ್ತ ಬೇರೆ । ಮನದಲ್ಲಿ । ಬಿಡು ಬಿಡು ಚಿಂತೆಯನು ॥ ॥ ಪಲ್ಲ ॥ ಬಡತನೈಶ್ವರ್ಯ ಎರಡಕ್ಕೆ ಕಾರಣ । ಒಡೆಯ ಶ್ರೀವೆಂಕಟರಮಣನು ತಾನೆ ॥ ಅನುಪಲ್ಲ ॥ ಜನನವಾಗದ ಮುನ್ನೆ । ಜನನಿಯ ತನುವಿನೊಳಗೆ ಪಾಲು ॥ ಜನನವಾದ ಬಳಿಕೆ ಜನನಿಯ ಮೊಲೆಯ ತುಳಿಯ ತುಳಿ । ಯುಣಿಸುತ ಜೀಸುವ ಜನವ ॥ ೧ ॥ ಹೆಣ್ಣು ಮಣ್ಣು ಹೊನ್ನು । ಈ ಮೂರನು । ಮುನ್ನೆ ಪಡಿಯಲಿಲ್ಲ ॥ ಅನ್ಯರ ನೋಡಿ ಸಹಿಸಲಾರದೆ । ಖಿನ್ನನಾಗಿ ನೀ ಬಳಲುವದ್ಯಾಕೆ ॥ ೨ ॥ ತಂದೆ ಫಲಗಳಿಲ್ಲದೆ । ಇರುತಿರೆ । ತಂದು ಬಯಸಲುಂಟೇ ॥ ತಂದೆ ಪುರಂದರವಿಠಲರಾಯನ ದಯ ಬಾರೆ । ಅಂದಿಗೆ ಇಹಪರ ಸುಖಭೋಗ ॥ ೩ ॥ ಶ್ರೀ ॥

### ೩೫. ರಾಗ ಯರಕಲಕಾಂಬೋಧಿ, ಝಂಪೆತಾಳ.

ಗರುವ ಗಂಭೀರ ನಾಯಕಾ ಹರಿಯೇ ॥ ಪಲ್ಲ ॥ ಹರಿಯೆ ಹಳಚಿಕೆ ಪುಳ್ಳವನಲ್ಲವೆ । ಸುರೂಪಿ ಸಮಗುಣನು ನೀನಲ್ಲವೆ ॥ ಸಿರಿವಂತ ಸರ್ವಕಳಂಕ ನೀನಲ್ಲವೆ । ಕರಸಿಕೊಳ್ಳೊ ಯಾಕೆನ್ನನು ಹರಿಯೆ ॥ ೧ ॥ ವೇಳೆ ಅಲ್ಲವೆ ಆನು ಬಂದದು । ಕೇಳುತಿಲ್ಲವೆ ಕಂಜನೇತ್ರ ॥ ಸೋ( ಸಾಸಿರದ ಗೋಪಿಯರೊಳಗಾಣ । ಸೂಳುಪಾಳಿ ನಿಂತೆರಹಿಲ್ಲವೆ ॥ ೨ ॥ ಕುಬುಜೆಯ ಕೂಟಬ್ಯಾಟದೊಳಿದ್ದೆಯೋ । ಅಬುಜೆಯಾಲಿಂಗನದೊ ಳಿದ್ದೆಯೋ ॥ ಅಬುಜನಾಭ ಪೇಳೆನ್ನಾಣೆ ನಿನ್ನ । ಚುಬುಕ ಪಿಡಿದು ಮುದ್ದಾಡುವೇನೋ ॥ ೩ ॥ ಏನೆನ್ನಬಾರದ ಎತ್ತೆನ್ನಬಾರದ । ಸ್ವಾಸು ಭಾವಿ ನೀನೆಂತೆಂಬಿಯೋ ॥ ಆನೇ ಮರುಳಾಗಿ ಬಂದೇನಲ್ಲದೆ । ನೀನೇ ಕೊಡೆ ಪಂಥ ಪ್ರಾಣೇಶನೇ ॥ ೪ ॥ ಈಗ ತಾನಾದರೆ ಮನಸಾಯಿತೇ ನಿನ್ನ । ಶ್ರೀಗೆ ಸಿಲುಕದ ಸಿರಿವಲ್ಲಭಾ ॥ ನಾಗಮಂಗಲದ ಚನ್ನ ಶ್ರೀ ಕೇಶವರೇಯ । ಭೋಗಿ ಪುರಂದರವಿಠಲರೇಯನೇ ನಮೊ ॥ ೫ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

### ೩೬. ರಾಗ ಸಹನ, ಆದಿತಾಳ.

ಗೋವಿಂದನ ಧ್ಯಾನ ಬಲು ಶುಭಕರವೋ ॥ ಪಲ್ಲ ॥ ಭಾವಿಸಿ ನೋಡಲು ಬಹು ಜನ್ಮಗಳ ಪಾಪಹರವೋ ॥ ಅನುಪಲ್ಲ ॥ ಒಂದಾವರ್ತಿ ನೆನೆಯಲು ಭವಬಂಧ ಖಿಲವೊ । ಹಿಂದಿನ ಸುಕೃತಕ್ಕೆ ಮುಂದಿನ ಸುಕೃತಾನಂದಫಲವೋ ॥ ೧ ॥ ವಿಧವಿಧ ಸಾಧನಕಿಂತಾ ಇದು ಬಲು ಘನವೊ ಉದರಂಭರಕ್ಕೆ ಉಡುವೊ ವಸನಕ್ಕೆ ಇದು ಸುಸಾಧನವೋ ॥ ೨ ॥ ಶ್ರೀರಾಮ ಪುರಂದರವಿಠಲ ಆರ ಪಾರವೋ । ಶೇರಿದವರಿಗೆ ಈ ಹರಿ ಧ್ಯಾನ ಕ್ರೂರಗೆ ದೂರವೋ ॥ ೩ ॥ ಶ್ರೀಃ

### ೩೭. ರಾಗ ಆನಂದಭೈರವಿ, ಆದಿತಾಳ.

ಜಗದಂತರ್ಯಾಮಿ ಯೆನ್ನ ಸ್ವಾಮಿ ॥ ಪಲ್ಲ ॥ ಅಗಣಿತ ಗುಣ ನೀನು ನಿನ್ನ ಗುಣವಲ್ಲವೆಂದು । ಬಗೆವವ ಜಗದೊಳಗೆ ಬ್ರಹ್ಮಹತ್ಯಗಾರ ॥ ೧ ॥

ಜಗತುಕರ್ತ ನೀನಿರಲು ಅನ್ಯರನ್ನ ದೈವವೆಂದು । ಬಗೆವವ ಜಗದೊಳಗೆ ಸ್ವರ್ಣಸ್ತೇಯಿ ॥ ೨ ॥ ಜಗದೊಡೆಯ ನೀನಿರಲು ಅನ್ಯದೈವರೊಡೆಯರೆಂದು । ಬಗೆವವ ಜಗದೊಳಗೆ ಮದ್ಯಪಾಯಿ ॥ ೩ ॥ ಜಗದ ತಾಯಿ ತಂದೆ ನೀನು ನಿನ್ನ ತಾನೇ ಯೆಂದುಗೊಂಡು । ಬಗೆವವ ಜಗದೊಳಗೆ ಗುರುತಲ್ಪಗ ॥ ೪ ॥ ಅವರ ತತ್ಸಂಯೋಗಿಗಳು ಪಂಚಮಹಾ ಪಾತಕರು । ದಾಸರ ಸಂಗದೋಳಿಡು ಪುರಂದರವಿಠಲಾ ॥ ೫ ॥ ಶ್ರೀ ॥

## ೩೮. ರಾಗ ಬೇಗಡೆ, ಅಟತಾಳ.

ಜತನ ಮಾಡೊ ಜೀವನವ । ಮುಂದೆ । ಮತಿಭ್ರಷ್ಟನಾಗಿ ನೀ ಕೆಡಬೇಡ ಮನುಜಾ ॥ ಪಲ್ಲ ॥ ಅಸ್ಥಿ ಮಲ ಮಾಂಸಾದಿ ಮೂತ್ರ । ಅದರ ಸುತ್ತಿಕೊಂಡಿರುವೋದು ಆಮರವ ಬಳ್ಳಿ ॥ ಇಟ್ಟಾಡೆಯಲಿ ಬಾಹೋ ರಭಸ । ಅದರ । ಹುಟ್ಟು ನೋಡಿದರೆ ಕುಂಬಾರನ ತಿಮಿರಿ ॥ ೧ ಹಿಂದೆ ತಗರು ಮುಂದೆ ಭಾಮಿ । ಅವರ । ಸಂದಣಿಸುವ ಎಡಬಲವಿ ಮದ್ದಾನೆ ॥ ಒಂದಕ್ಕೆ ಒಂದು ಸಾಧನವ । ಅದರ । ಮುಂದೆ ನೋಡಿದರೆ ತಾನದಸೋನೆ ॥ ೨ ॥ ಹಮ್ಮು ಹಂಕಾರ ಈಡ್ಯಾಡು । ಪರ ಬೊಮ್ಮಾಸಂಪರದಲ್ಲಿ ತೆರಳಿ ಮುಣುಗ್ಯಾಡು ॥ ನಿನ್ನಲ್ಲಿ ನೀ ತಿಳಿದು ನೋಡು । ಪ್ರ । ಸನ್ನ ಶ್ರೀಪುರಂದರವಿಠಲನ್ನ ಕೂಡು ॥ ೩ ॥ ಶ್ರೀ ॥

## ✓೩೯. ರಾಗ ನಾಟಿ, ಛಾಪುತಾಳ.

ಜಯ ಜಯಾ ॥ ಪಲ್ಲ ॥ ಜಯ ಜಾನಕೀಕಾಂತ ಜಯ ಸಾಧುಜನವಿನುತ । ಜಯತು ಮಹಿಮಾನಂತ ಜಯ ಭಾಗ್ಯವಂತಾ ॥ ಅನುಪಲ್ಲ ॥ ದಶರಥಮುಗ ವೀರ ದಶಕಂಠಸಂಹಾರ । ಪಶುಪತೀಶ್ವರಮಿತ್ರ ಸವನಚರಿತ್ರ ॥ ಕುಸುಮಬಾಣಸ್ವರೂಪ ಕುಶಲಕೀರ್ತಿಕಲಾಪ । ಅಸಮಸಾಹಸತಿಕ್ಷ ಅಂಬುಜದಳಾಕ್ಷಾ ॥ ೧ ॥ ಸಾಮಗಾನವಿಲೋಲ ಸಾಧುಜನಪರಿಪಾಲ । ಕಾಮಿತಾರ್ಥವಿದಾತ ಕೀರ್ತಿಸಂಜಾತಾ ॥ ಸೋಮಸೂರ್ಯಪ್ರಕಾಶ ಸಕಲಲೋಕಾಧೀಶ । ಶ್ರೀಮಹಾರಘುವೀರ ಸಿಂಧುಗಂಭೀರಾ ॥ ೨ ॥

ಸಕಲಶಾಸ್ತ್ರವಿಚಾರ ಶರಣಾಜನಮಂದಾರ । ವಿಕಸಿತಾಂಬುಜವದನ ವಿಸ್ಮಯಸದನಾ ॥ ಸುಕೃತಮೋಕ್ಷಾಧೀಶ ಸಾಕೇತಪುರವಾಸ । ಭಕ್ತವತ್ಸಲ ರಾಮ ಪುರಂದರವಿಠಲಾ ॥ ೩ ॥ ಶ್ರೀಃ ॥

## ೪೦. ರಾಗ ಮೋಹನ, ಅಟತಾಳ.

ಜ್ಞಾನವೊಂದೇ ಸಾಕು ಮುಕ್ತಿಗೆ। ಇನ್ನೇನು ಬೇಕು ಹುಚ್ಚು ಮರುಳೆ (ಮಾನವನೆ) ॥ ಪಲ್ಲ ॥ ಪಿತಮಾತೆ ಸತಿಸುತರಗಲಿರಬೇಡ । ಯತಿಯಾಗಿ ಅರಣ್ಯ ಚರಿಸಲುಬೇಡ ॥ ವ್ರತನೇಮವ ಮಾಡಿ ದಣಿಯಲುಬೇಡ । ಸತಿಯುಳ್ಳವಗೆ ಸದ್ಗತಿ ಇಲ್ಲೊ ಮೂಢಾ ॥ ೧ ॥ ಜಪತಪವನೆ ಮಾಡಿ ದಣಿಯಲುಬೇಡ । ಕಪಿಯಾಗಿ ಅಡಿಗಡಿಘಾರಲುಬೇಡ ॥ ಉಪವಾಸರಸ ಕಾತಿ ಕಳಿಯಲುಬೇಡ । ಚಪಲತನದಲ್ಲಿ ಫಲವಿಲ್ಲೊ ಮೂಢಾ ॥ ೨ ॥ ಜಾಗ್ರತೆಯಲಿ ನಿದ್ರೆ ಕಳೆಯಲುಬೇಡ । ಆಗ್ರಹವನ್ನು ಬಿಟ್ಟು ಒಣಗಲುಬೇಡ ॥ ಸೋಗುಮಾಡಿ ಮಾತು ಕಳೆಯಲುಬೇಡ । ಗೂಗೆ ಹಾಂಗೆ ಕಣ್ಣು ಮುಚ್ಚಲುಬೇಡ ॥ ೩ ॥ ಹೊನ್ನು ಹೆಣ್ಣು ಮಣ್ಣು ಜರದಿರಬೇಡ । ಅನ್ನ ವಸ್ತ್ರ ನೀನು ತೊರದಿರಬೇಡ ॥ ನನ್ನದೆಂದು ದೇಹ ನಂಬಲುಬೇಡ । ತಣ್ಣೀರು ಮುಣುಗಿ ನಡುಗಲು ಬೇಡ ॥ ೪ ॥ ಮಹಾವಿಷ್ಣುಮೂರ್ತಿಯ ಮರದಿರಬ್ಯಾಡ। ನಾಯಾಸ ದಿನದಲ್ಲಿ ಶ್ರಮ ಪಡಬೇಡ॥ ಕುಹಕಬುದ್ಧಿಯಲಿ ಕುಣಿದಾಡಬೇಡ। ಪುರಂದರವಿಠಲನ್ನ ಮರದಿರಬೇಡ ॥ ೫ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೪೧. ರಾಗ ತೋಡಿ, ಅಟತಾಳ.

ತಾತ್ತತ ಧಿಮಿತ ಧಿಮಿಕೆ ಯೆನುತ ಹರಿಯಾಡಿದನೇ ॥ ಪಲ್ಲ ॥ ಚಿತ್ರಜಪಿತನುತ್ತುಮ ಮುತ್ತಿನ । ಗೊತ್ತುಗಳನ್ನುತ್ತಿಗೆಯೊಳಗೆತ್ತ್ಯಾಡುತ ॥ ಅನುಪಲ್ಲ ॥ ಹಾರ ಪದಕ ಕೇ। ಯೂರ ಕಿರೀಟವು। ಧೀರ ಬಾಹುಪುರಿಯುದು। ವೀರ ಹೊಳೆಯುತಿರೆ। ಮಾರಜನಕ ಸುಕು। ಮಾರ ಸಾಂ

ಗುಣಸಾಂದ್ರ ಮಹಿಮ ಹರಿ ॥ ೧ ॥ ಮಂದಗಮನೆಯರು । ಬೃಂದ ಬೃಂದವಲಿ । ಚಂದ ನೋಡುತಿರೆ ಆ । ನಂದಗೋಪನ ಕಂದ ಮು । ಕುಂದ ನಿತ್ಯಾನಂದ ॥ ೨ ॥ ಕಂಕಣ ಪಂಕಿಯು । ಕಿಂಕಿಣಿ ರವಗಳು । ಶಂಖ ಚಕ್ರ ದಿವ್ಯ । ಪಂಕಜಮಾಲೆಯು । ಶಂಖಗಳ ಶ್ರೀಪುರಂದರ ವಿಠಲ ವೇ । ದಾಂತವೇದ್ಯ ಕೃಷ್ಣ ॥ ೩ ॥ ಶ್ರೀ ॥

## ೪೨. ರಾಗ ಸೌರಾಷ್ಟ್ರ, ಅಟತಾಳ.

ತಾಯಿ ತಂದೆ ಯೆನ್ನ ಗುರುದೈವ ನೀನೆ । ಕೃಷ್ಣಾ । ಪಾಹಿ ಪಂಚಾಕ್ಷರ ಪರಮಪುಣ್ಯ ನೀನೆ ॥ ಪಲ್ಲ ॥ ಕಂದನು ಮಾಡಿದ ತಪ್ಪು ಕಾಯುವ ನೀನೆ । ರಾಮ । ಕಂದರ್ಪಜನಕನೆ ಮೋಕ್ಷದಾತನು ನೀನೆ ॥ ೧ ॥ ಅರುಣ ಕರುಣ ಹಿಡಿದು ಕರ್ಮ ಕಳಿಯಬೇಕೋ । ಮುಂದೆ । ಮರಣ ಜನನವಿಲ್ಲದ ಪದವಿ ಸೇರಿಸಬೇಕೋ ॥ ೨ ॥ ಎಂದೆಂದಿಗೂ ನಿನ್ನ ದಾಸನಾಗಬೇಕೊ । ಪು । ರಂದರವಿಠಲ ಚರಣವನ್ನು ತೋರಬೇಕೋ ॥ ೩ ॥

## ೪೩. ರಾಗ ಆನಂದಭೈರವಿ, ಅಟತಾಳ.

ತುತ್ತುರು ತೂರೆಂದು ಬತ್ತೀಸರಾಗಗಳನು । ಚಿತ್ತವಲ್ಲಭ ತನ್ನ ಕೊಳಲನೂದಿದನು ॥ ಪಲ್ಲ ॥ ಗೌಳ ನಾಟಿ ಆಹೇರಿ ಗೂರ್ಜರಿ ಮಾಳವಿ ಸಾರಂಗ ರಾಗ । ಕೇಳಿ ರಮಣಿರತಿ ದೂರದಿಂದ ॥ ಫಲಮಂಜರಿ ಗೌಳಿ ದೇಶಾಕ್ಷರಿ ರಾಗಂಗಳನು । ನಳಿನನಾಭನು ತನ್ನ ಕೊಳಲನೂದಿದನು ॥ ॥ ೧ ॥ ಅಂಗಾಲಿಗೆ ಬಂತಿಕ್ಕಿ ಮುಂಗಾಲಿಗೆ ಕಡಗವನಿಟ್ಟು । ಉಂಗುಷ್ಟವಲಿ ಉಂಗುರವ ಹಾಕಿ ॥ ಅಂಗಣಕ್ಕೆ ಬಂದು ನಿಂತು ಹಿಂಗಣಕ್ಕೆ ಮೊಲೆಕಟ್ಟುವಳು । ಗಂಗಾಜನಕನ ಬಳಿಗೆ ಶೃಂಗಾರಿಸಿ ಬಂದು ನಿಂತಳು ॥ ೨ ॥ ಕಣ್ಣಿಗೆ ಕಾಡಿಗೆ ಯೆಂದು ಚನ್ನ ಶ್ರೀಗಂಧವನಿಟ್ಟು । ಬೆಣ್ಣೆನೆಲ್ಲವು ತಮ್ಮ ಕರುಗಳಿಗಿಕ್ಕಿ ॥ ಅಣ್ಣೆನ್ನಾರುಣ್ಣೆಂಣೆಂದು ಗಂಡಗೆ ಮುರುವನಿಕ್ಕಿ । ಚಿನ್ನಕೈಯಿಂದಲಿ ಹಸ್ತಕ್ಕೆ ಪನ್ನೀರು ತಂದಿರಿಸಿದಳು ॥ । ೩ ॥ ಹಸುವಿನ ಮೊಲೆಗೆ ತಮ್ಮ ಶಿಶುವಿನ ಉಣಚಾಚಿ । ಪಶುಗಳ ಕರುಗಳ ಹಿಡಿದೆತ್ತಿಕೊಂಡು ॥ ಬಿಸಿವಿಸಿ ವಾಗರವೆಲ್ಲ ಪತಿಯೆಂದು ಪಶು

ಗಳಿಗಿಕ್ಕಿ । ಕುಸುಮನಾಭನ ಬಳಿಗೆ ಹಸ್ತವಲಿದು ನಿಂತಳು ॥ ೪ ॥ ತುರುಗಳ ಹಿಂಡುಗಳ ಕಾಯಿದು ಸುರರಿಗೆ ಸುಖವನಿತ್ತೆ । ತರುಣಿ ನಿಮ್ಮ ಗಂಡರು ಜೈವರಮ್ಮ॥ ಮರುಳಾಗದೆ ನೀವು ನಿಮ್ಮ ಮನೆಗಳನ ಬಿಟ್ಟುಕೊಂಡು । ಇರುವದು ಉಚಿತವಲ್ಲ ಭರದಿಂದ ಹೋಗಿರೇ ॥ ೫ ॥ ಮನೆಮನೆ ಯೆಂಬೋದಿಲ್ಲ ಮನೆ ನಮಗೆ ಬೇರೊಂದಿಲ್ಲ । ಮನೆ ಉಂಟೆ ಶ್ರೀಕೃಷ್ಣಾ ನಿನ್ನ ಬಿಟ್ಟು ॥ ಮನವಿಲ್ಲದೆ ಮನೆಯು ಕಾಣೆ ಮನೆ ನಮಗೆ ಮತ್ತೊಂದು ಇಲ್ಲ । ಘನಮಹಿಮೆ ಶ್ರೀಕೃಷ್ಣ ನಿಮ್ಮ ಮನೆಯೆಂಬೋದು ಘನಮಹಿಯು ॥ ೬ ॥ ನಿಂದು ತಲೆಯ ಬಾಗಿ ಬಂದು ಕಣ್ಣೀರನ ಒರಸಿ । ಚಂದದುಂಗುಷ್ಟದಲಿ ಬರವುತಲಿ ॥ ಅಂದೆಂದು ನಮ್ಮ ಕೂಡಿ ಹಂಬಲಿ ಯಾಕೋ ನಿನ್ನ । ಅಂದೇವೆ ಪುರಂದರವಿಠಲರಾಯನೇ ॥ ೭ ॥

## ೪೪. ರಾಗ ಕಾಂಬೋಧಿ, ಏಕತಾಳ.

ದಾಸನಾಗೋ ನೀ ಶಿಷ್ಯನಾಗೋ ॥ ಪಲ್ಲ ॥ ಏಸು ಕಾಯುಂಗಳ ಕಳಿದು ಎಂಭತ್ತನಾಲ್ಕುಲಕ್ಷ ಜೀವರಾಶಿಯನ್ನೆ ದಾಟಿ ॥ ಅನುಪಲ್ಲ ॥ ಆಶಾಪಾಶ ಎಂಬೊ ಪರಮಾಬ್ಧಿಯೊಳಗೆ ಮುಳುಗಿ ಮಾಯ । ಪಾಶಕ್ಕೊಳಗಾಗದೆ ಮಾನ್ಯನಾಗೋ । ನೀ ಧನ್ಯನಾಗೋ ॥ ೧ ॥ ಮಾಯದ ಗೂಡಿಗೆ ಸಿಕ್ಕಿ ಘಡಿಘಡಿ ಘಡಿಸುತ್ತ ರಘು । ರಾಮನೆಂಬೊ ವಸ್ತುವನ್ನು ಚನ್ನಾಗಿ ನಂಬೋ । ನೀನಾಗಿ ನಂಬೋ ॥ ೨ ॥ ಈಗಲ್ಯೋ ಆಗಲ್ಯೋ ಇನ್ನಾವಾಗಲ್ಯೋ ಈ ಸಂಸಾರ । ಹೋಗುವ ಜೀವಕ್ಕೆ ನಿನಗೆ ತಂದೆ ಯಾರೋ ತಾಯಿ ಯಾರೋ ॥ ೩ ॥ ಇತ್ತಲ್ಯೋ ಅತ್ತಲ್ಯೋ ಇನ್ನೆತ್ತಲ್ಯೋ ಈ ಸಂಸಾರ । ಮೃತ್ಯು ಇದು ನಿತ್ಯವೆಂದು ನಂಬಬೇಡೋ । ನೀ ನಂಬ ಬೇಡೋ ॥ ೪ ॥ ಸೋರೆವಳಗೆ ಮದ್ಯವ ತುಂಬಿ ಮೇಲೆ ಗಂಧಾಕ್ಷತೆ ಹಚ್ಚಿ । ಮೇಲೆ ಹುವ್ವಿನ ಸರವನೆ ಧರಿಸಿದಂತೆ । ನೀ ಮರಸಿದಂತೆ ॥ ೫ ॥ ಮೂರುಭಾರಿ ಶರಣುಮಾಡಿ ನೀರುವಳಗೆ ಮುಣುಗಿ । ಪರನಾರೀರ ಮನಕ್ಕೆ ಕರೆಯುಮಾಡಿ । ನೀ ಗುರಿಯುಮಾಡಿ ॥ ೬ ॥ ನಾರಾಯಣ ಅಚ್ಯುತ ಅನಂತ ಕೇಶವ ಕೃಷ್ಣನ್ನ ನಂಬಿ ಭಜಿಸೋ । ಪುರಂದರ ವಿಠಲನ ಲಂಡಜೀವನೇ । ನೀ ಭಂಡಜೀವವೇ ॥ ೭ ॥ ಶ್ರೀ

## ೪೫. ರಾಗ ಕಾಪಿ, ಅಟತಾಳ.

ಧರ್ಮಮೇಕಃ ಸಹಾಯಃ ॥ ಪಲ್ಲ ॥ ಪರಬ್ರಹ್ಮಮೂರುತಿಯ ಪಾದವ ಭಜಿಪ ಸುಜನರಿಗೆ ॥ ಅನುಪಲ್ಲ ॥ ಹರಿಭಕುತಿಯನು ಮಾಳ್ಪ ಪರಮ ಭಾಗವತರಿಗೆ । ಕರವ ಭೂಸುರರಿಗನ್ನವನಿತ್ತಗೆ ॥ ಪರಸತಿಯರನು ಕಂಡು ಮನ ವ್ಯಳಸದಿಪ್ಪನಗೆ । ಪರರುಪದ್ರವ ಬಿಡಿಸಿ ಪೊರೆವ ಸುಜನರಿಗೆಲ್ಲ ॥ ೧ ॥ ನಿತ್ಯ ನೇಮ ಬಿಡದೆ ಸತ್ಯದಲಿ ನಡದವಗೆ । ವ್ಯರ್ಥವಾಗಿ ಹೊತ್ತು ಕಳೆಯದವಗೆ ॥ ಚಿತ್ತಶುದ್ಧಿಯಲಿ ಪರವಸ್ತು ಹರಿಯನು ತನ್ನ । ಹೃತ್ಕಮಲ ಮಧ್ಯದಲಿ ಇಟ್ಟು ಭಜಿಪರಿಗೆಲ್ಲ ॥ ೨ ॥ ಮಾತೃ ಪಿತೃಗಳನ್ನ ಪ್ರಿಯದಲಿ ಪೊರೆದವಗೆ । ಯಾತ್ರೆಗಳ ಮಾಳ್ಪ ಪುಣ್ಯಾತ್ಮಗೆ ॥ ಧಾತ್ರಿಯೊಳು ಪುರಂದರವಿಠಲನ ನಾಮವನ್ನು । ಕೀರ್ತನೆ ಮಾಡಿ ಲೋಲ್ಯಾಡುತಿಹ ಸುಜನರಿಗೆ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೪೬. ರಾಗ ಶಂಕರಾಭರಣ, ಅಟತಾಳ.

ನಳಿನಜಾಂಡ ತಲೆಯ ದೂಗಿ ಮೋಹಿಸುತಿರಲು । ಕೊಳಲನೂದಿ ಭ್ರಾಜಿಸುವ । ಚಲುವ ಕೃಷ್ಣರಾಯನ ನೋಡಿ ॥ ಪಲ್ಲ ॥ ಹೊಳೆವ ಹೊಂಬಣ್ಣ ಧಟ್ಟಿ ಚಲ್ಲಣ ಅಳವಡಿಸಿದ ನೀಲಿಯ ಬಿಗಿದು । ಹಲವು ರನ್ನದ ಉಂಗುರನಿಟ್ಟ ಚಲುವ ಬೆರಳ ನಟಿಸುತ ॥ ಲಲಿತ ವಾಮ ತೋಳನ ಮೇಲೆ ಹೊಳೆಯ ವಾರೆದೃಷ್ಟಿ ಯುಸಿಯೆ । ಬಲದ ಪಾದ ಎಡಕೆ ಚಾಚಿರೆ ಜಲಜದಂದದಿ ಹೊಳೆಯಲು ನೋಡಿ ॥ ೧ ॥ ಗುಲಗಂಜಿಸರ ಕಲ್ಲಿಯ ಚಿಕ್ಕ ಗಜಗಿನ ಚೀಲ ಶಳೆಗೋಲಾಮುಚಿ । ಘಲ್ಲು ಕೆಂಬಾ ಪೆಂಡೆ ಘಮ್ಮುಘಮ್ಮುಸುವ ಮಲಯಜಾಮಿತ ಲೇಪಿತ ॥ ಮಲ್ಲಿಗೆ ಮಾತತಿ ಬಳ್ಳಿಯ ದಳಲು ಹಲವು ಸಾಗರಗಳೊಲಿವುತಿರಲು । ತಳಿತ ಕಲ್ಪವೃಕ್ಷದ ನೆಳಲೊಳು ಗೆಳೆಯ ಗೋವರಿಂದಾಡಲು ॥ ೨ ॥ ಮಾರವ ವೇಳಿ ಗುಜ್ಜರಿ ಭೈರವ ಗೌಳ ನಾಟಿ ಸಾವೇರಿ ಆಹೆರಿ । ಭೂರಿ ಕಾಂಭೋಧಿ ಪಾಡಿ ದೇಶಾಕ್ಷಿ ಶಂಕರಭರಣ ಮಾಳವಿ ॥ ವರಾಳಿ ಕಲ್ಯಾಣಿ

ತೋಡಿ ಮುಖಾರಿ ಯರಳಿ ವಸಂತ ಬೌಳಿ ಧನ್ಯಶ್ರೀ । ಸೌರಾಷ್ಟ್ರ ಗುಂಡ ಕ್ರಿಯ ರಾಮಕ್ರಿಯ ಮೇಘ ಕುರಂಜಿಯು ಪಾಡಲು ನೋಡಿ ॥ ೩ ॥ ಹರುಷದಿಂದ ವನದಿ ಸುಮಾರವ ಪುರದ ಸತಿಯರೆಲ್ಲರು ಕೇಳಿ । ಮರದು ಮನೆಯ ಮಕ್ಕಳ ಜರಿದು ನೆರದು ಹರಿಯ ವಲಿಸುತ ॥ ಹರಿಣ ಕರಿಯು ಕೇಸರಿವೃಂದ ತುರಗ ಮಹಿಷ ಉರಗ ಮೂಷಕ । ಹರಿಯ ಕೊಳಲರವಕೆ ಮೋಹಿಸಿ ಮರದಿರೆ ಜಾತಿವೈರವ ॥ ೪ ॥ ಕರಗಿ ಕಲ್ಲು ನೀರಾಗಿ ಹರಿಯೆ ತೆರೆಗಳಿಂದುಕ್ಕಿ ಹರಿಯೆ ಯಮುನೆ । ತುರು ಖಗ ಬರ್ಹಿ ಸ್ತ್ರೀಯರು ಚಿತ್ರದಿ ಬರದ ಪ್ರತಿಮೆಯಂತಿರೆ ॥ ಸುರರು ನಭದಿ ನೋಡಿ ಕುಸುಮಗರೆಯೆ ಭೇರಿ ದುಂದುಭಿ ಮೊರೆಯೆ । ಪುರಂದರ ವಿಠಲ ಗೋಕುಲದಿ ವೇಣುನಾದ ಮಾಡಲು ನೋಡಿ ॥ ೫ ॥ ಶ್ರೀ ॥

### ೪೭. ರಾಗ ಕಲ್ಯಾಣಿ, ಅಟತಾಳ.

ನರಹರಿ ಯೆನಬಾರದೇ ॥ ಪಲ್ಲ ॥ ಭಾರಿಭಾರಿಗೀ ಶರೀರವು ಬಾರ ಧಾಂಗ ಮಾಡೋ ನಾಮವು । ಘೋರಿಸಿದ ಪ್ರಹ್ಲಾದನ ಜನಕನ ಉರವ ಸೀಳಿದ ನಾಮವು ॥ ಅನುಪಲ್ಲ ॥ ದಾರಿದ್ರ್ಯಾದಿ ಭಯವೊಂದು ಇಲ್ಲ ದಾರಿ ವೈಕುಂಠಕ್ಕೆ ತೋರೋದಲ್ಲ । ನಾರಾಯಣ ನಿಮ್ಮ ನಾಮವುಚ್ಚರಿಸಿದ ನಾರದ ದೇವಋುಷಿಯಾದನು ॥ ೧ ॥ ಜಪತಪದಲಿ ಮಾಡು ಮತಿ ಜಪಿತ ಮಾರ್ಗವಿದು ಕಠಿನವಲ್ಲ । ಶ್ರೀಪತಿಯೆಂದ ದ್ರೌಪದಿಯ ಅಭಿಮಾನವ ಕಾಯಿದ ಶ್ರೀನಾಮವು ॥ ೨ ॥ ಮಂಗಳಮೂರುತಿಯೆ ಹಿಂಗದೆ ಭಕ್ತಿರಸದಲ್ಲಿ ಮುಣುಗಿದೆ । ರಂಗ ಪುರಂದರವಿಠಲರಾಯನ ಉರಗ ಶಯನನಾದ ನಾಮವು ॥ ೩ ॥ ಶ್ರೀ ॥

### ೪೮. ರಾಗ ಮೋಹನ, ಅಟತಾಳ.

ನಾಡಮಾತು ಬೇಡ ನಾಲಿಗೆ । ನಿನ್ನ । ಬೇಡಿಕೊಂಬೆನು ಕಂಡ್ಯ ನಾಲಿಗೆ ॥ ರೂಢಿಗೆ ಶ್ರೀಹರಿ ಕೈವಲ್ಯದಾರಿಯ । ನಾಮವ ನೆನೆ ಕಂಡ್ಯ ನಾಲಿಗೆ ॥ ಪಲ್ಲ ॥ ಹಾರಿ ಹೊತ್ತರೆದ್ದು ನಾಲಿಗೆ । ಶ್ರೀನಿವಾಸನ ನೆನೆ ಕಂಡ್ಯ ನಾಲಿಗೆ ॥ ಶಕ್ತಿಯಂತೆ ನೀನು ಮತ್ತೆ ಬೊಗಳದಿರು । ಸತ್ತಾಂಗಿರು

ಕಂಡ್ಯ ನಾಲಿಗೆ ॥ ಅನುಪಲ್ಲ ॥ ಉಂಬೋದು ಉಡುವ್ಹೋದು ನಾಲಿಗೆ । ಬಹು ತಲಿಬಲಿಕೊಂಡೆ ನೀ ನಾಲಿಗೆ ॥ ಮುಂದೆ ಕಾಣದೆ ಹೋಗಿ ಬಂದು । ಜಗಕ್ಕೆ ತಂದು ನಿಲಿಸಿದಿ ನಾಲಿಗೆ ॥ ೧ ॥ ಅತ್ತೆ ಮಾವನ ಜೈವ ನಾಲಿಗೆ । ಇದು ಮತ್ತೆ ಗಂಡನ ಜೈವ ನಾಲಿಗೆ ॥ ಸುತ್ತುಮುತ್ತರದಿಂದ ದೇವ ಬ್ರಹ್ಮರ ಜೈವ । ನಾಯಾಂಗಿರು ಕಂಡ್ಯ ನಾಲಿಗೆ ॥ ೨ ॥ ರಸ ಬಾಯಾರುಂಬೋದು ನಾಲಿಗೆ । ಶ್ರೀನಿವಾಸನ ನೆನೆ ಕಂಡ್ಯ ನಾಲಿಗೆ ॥ ಪೊಡವಿಯೊಡೆಯು ಎನ್ನ ಪುರಂದರವಿಠಲನ್ನ । ನಾಮವ ನೆನೆ ಕಂಡ್ಯ ನಾಲಿಗೆ ॥ ೩ ॥ ಶ್ರೀ ॥

## ೪೯. ರಾಗ ಕೇದಾರಗೌಳ, ಅಟತಾಳ.

ನಾಯಿ ಬಂದದಪ್ಪಾ ಅಣ್ಣಾ ಅತ್ತಲಾಗಿರಿ ॥ ಪಲ್ಲ ॥ ನಾಯಿ ಅಂದರೆ ನಾಯಿ ಅಲ್ಲ ಮಾನವ ಜನ್ಮದ ಹೀನ ನಾಯಿ ॥ ಅನುಪಲ್ಲ ॥ ಕೊಟ್ಟ ಸಾಲವ ಕೊಡದವ ನಾಯಿ । ಇಟ್ಟ ಭಾಷೆಯ ತಪ್ಪುವ ನಾಯಿ ॥ ಕಟ್ಟೆಮೇಲೆ ಕುಳಿತುಕೊಂಡು । ಅಟ್ಟಹಾಸದಿ ಬಗುಳುವ ನಾಯಿ ॥ ೧ ॥ ಕೊಟ್ಟು ಕುದಿಯುವ್ಹೋ ಕೆಟ್ಟ ನಾಯಿ । ಇಟ್ಟ ಅನ್ನವ ಹಂಗಿಸ ನಾಯಿ ॥ ಪುಟ್ಟಿ ಮಾತೆ ಗರ್ಭದಲ್ಲಿ । ಕೆಟ್ಟ ಕೃತ್ಯವ ಮಾಳ್ಪವ ನಾಯಿ ॥ ೨ ॥ ಪಟ್ಟ ಸ್ತ್ರೀಯಳ ಬಿಟ್ಟವ ನಾಯಿ । ಬಿಟ್ಟ ಸ್ತ್ರೀಯಳ ಆಳ್ವವ ನಾಯಿ ॥ ದಿಟ್ಟ ಶ್ರೀಪುರಂದರವಿಠಲರಾಯನ ಮನ । ಮುಟ್ಟಿ ಭಜಿಸದೆ ಹೋದವ ನಾಯಿ ॥ ೩ ॥ ಶ್ರೀ ॥

## ೫೦. ರಾಗ ಸುರುಟಿ, ಆದಿತಾಳ.

ನಾರಸಿಂಹನೆಂಬೊ ದೇವನು । ನಂಬಿದಂಥ । ನರರಿಗೆಲ್ಲ ವರವ ಕೊಡುವನು ॥ ಪಲ್ಲ ॥ ಓಂ ನಮಃ ಶಿವಾಯ ಎನುತಲಿ । ಅಸುರ ತನ್ನ । ಸುತನ ಬರದು ತೋರು ಯೆಂಬಾಗ ॥ ನರಹರಿಯ ನಾಮವನ್ನ ನಗಿಯುತಲೆ ಬರಿಯುತಿರಲು । ಎಡತೊಡೆಯ ಮೇಲೆ ಶಿಶುವ ಧರೆಗೆ ಬಡದು ನೂಕಿದನು ॥ ೧ ॥ ಸುತ್ತು ಜನರ ಕರಿಸಿ ಜೇಗದಿ । ಅಸುರ ತನ್ನ । ಸುತನ ಕೊಲ್ಲಿಸಬೇಕೆಂಬಾಗ ॥ ಅಟ್ಟ ಅಡವಿಯೊಳ್ಪಿಸವ

ಇಟ್ಟು ಭೋಜನಂಗಳ್ಮಾಡಿ । ಹರಿಯ ಸ್ಮರಣೆ ಮಾಡುತಲೇ ಕುಂಜ ತೀರಿವ ಜಟ್ಟಿ ಹಾಂಗೆ ॥ ೨ ॥ ಅಂಬುಧಿಯೊಳ್ಮಗನ ಮಲಗಿಸಿ । ಮೇಲೆ ದೊಡ್ಡ । ಬೆಟ್ಟವನ್ನು ಇಟ್ಟು ಬನ್ನಿರೊ ॥ ಹರಿಯ ಕೃಪೆಗೆ ವಶನಾದ ತರಳನೆರದು ವರುಣದೇವ । ಮರಣ ಇಲ್ಲಧಾಂಗೆ ಮಾಡಿ ಮನೆಯು ತೊಟ್ಟು ಕಳಸಿದನು ॥ ೩ ॥ ಬೆಟ್ಟದಿಂದ ಕಟ್ಟಿ ಉರುಳಿಸಿ । ಅಸುರ ತನ್ನ । ಪಟ್ಟದಾನೆ ಕಾಲಿಲಿ ಮೆಟ್ಟಿಸಿ ॥ ಹರಲು ಮನೆಯ ಮಾಡಿ ಸುಟ್ಟು ಹುಲಿಯು ಬೋನಿನಲ್ಲಿ ಇಟ್ಟು। ಎತ್ನವಿಲ್ಲದೆ ಸುತನ ಕೊಲ್ಲಲಿಕ್ಕೆ ಶಕ್ತನಲ್ಲದೆ ಪೋದನಂತೆ ॥ ೪ ॥ ನಿನ್ನ ದೇವ ಇದ್ದ ಎಡವನು । ತೋರು ಯೆನುತ । ಪಿತನು ತನ್ನ ಸುತನ ಕೋರಲು ॥ ಎನ್ನ ದೇವ ಇಲ್ಲದಂಥ ಎಡಗಳುಂಟೆ ಲೋಕದಲಿ । ಕಂಬದಲ್ಲು ಇರುವನೆಂದು ಕೈಮುಗಿದು ತೋರ್ಪನಾಗ ॥ ೫ ॥ ವರ ಕಂಬವನ್ನು ವಡೆಯಲು । ನರಹರಿಯು । ಉಗ್ರಕೋಪವನ್ನು ತಾಳಿ ॥ ಕಟಕಟೆಂಬ ಧ್ವನಿಯು ಮಾಡಿ ನಖಗಳಿಂದ ಹಿಡಿದು ವತ್ತಿ । ಕರುಳ ಬಗದು ಮೇಲೆ ಹಾಕಿ ಕಂದ ಭಕ್ತನಪ್ಪಿಕೊಂಡ ॥ ॥ ೬ ॥ ಅಂತರಿಕ್ಷದಲ್ಲಿ ಅಮರರು । ನೋಡಿ ಆಗ । ಪುಷ್ಪವೃಷ್ಟಿಯನ್ನು ಕರಿಯಲು ॥ ಅಜನ ಪಡದ ದೇವಿ ಬಂದು ತೊಡೆಯು ಮೇಲೆ ಕುಳಿತು ಕೊಂಡು । ಅಮರಪತಿಯರೆಲ್ಲ ನೋಡಿ ಅಂಜಬೇಡೆಂದಭಯ ಕೊಟ್ಟ ॥ ॥ ೭ ॥ ಲಕ್ಷ್ಮೀನಾರಸಿಂಹನ ಚರಿತೆಯು । ಉದಯಕಾಲ । ಪಠಿಸುವಂಥ ನರರಿಗೆಲ್ಲ ॥ ಪುತ್ರಸಂತಾನಂಗಳಿತ್ತು ಮತ್ತು ಬೇಡಿಧಾಂಗೆ ಕೊಟ್ಟು । ಭಕ್ತವತ್ಸಲ ಮುಕ್ತಿ ಕೊಡುವ ಪುರಂದರವಿಠಲರೇಯ ॥ ೮ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೫೧. ರಾಗ ಮೋಹನ, ಅಟತಾಳ.

ನಿನ್ನ ದಯದೃಷ್ಟಿಗೆ ಚಿತ್ತವಿಲ್ಲದಿರೆ । ಮುನ್ನೇನು ಗತಿಯು ಯೆನಗೆ ॥ ॥ ಪಲ್ಲ ॥ ಚೆನ್ನಾರ ಚೆಲುವ ಕೇಶವರಾಯ ನಂಬಿದೆನೋ । ಧನ್ಯನ ಮಾಡಿ ಸಲಹೋ ದೇವಾ ॥ ಅನುಪಲ್ಲ ॥ ಅರಿಯನೋ ತಾರತಮ್ಯಾನು ಸಾರಗಳಿಂದ ಗುರುಹಿರಿಯರನು ಭಜಿಸದೆ । ಗರುವ ಅಹಂಕರದಲ್ಲಿ

ಐಶ್ವರ್ಯಮದದಿಂದ ಪರರ ನಿಂದಿಸುತಲಿಪ್ಪೆ ॥ ಆರುಣೋದಯವಲಿಪ್ಪ ಸ್ವಪ್ನಹಳವಹದೆಂದು ಮೋರೆ ತೊಳೆಯದೆ ಮೆಲ್ಲುತಿಪ್ಪೆ । ಘೋರ ಮುರಿತಗಳ ಯೆಣಿಸಿದರೆ ನೆಲೆಗಾಣೆ ಮೊರೆಹೊಕ್ಕೆ ಹರಿ ರಕ್ಷಿಸೋ ॥ ೧ ॥ ಸ್ನಾನಮಾಡಿದರೆನ್ನ ದೇಹ ತಾಳದು ಯೆಂದು ಕಳ್ಳನಾಮವ ತಿಪ್ಪುವೇ । ಘನ್ನ ಬ್ರಹ್ಮರು ಉಪನ್ಯಾಸ ಮಾಡಿದರೆ ಕಂಡು ಕೋಪದಿ ನೂಕುವೇ ॥ ದೀನತ್ವದಿಂದ ಒಬ್ಬರಿಗೆ ರುಪ್ಪಿ ಕೊಡದಲೆ ಧನ ಘಳಿಸಿ ಕೂಡ್ಯಾಕುವೇ ಏನು ಮಾಡಲಿ ಜನ್ಮ ವ್ಯರ್ಥವಲ್ಲದೆ ಕೆಟ್ಟೆ ನೀನೆ ರಕ್ಷಕನು ಕಾಯೋ ದೇವಾ ॥ ೨ ॥ ಸತಿಸುತರ ಮೆಚ್ಚಿ ತಾಯಿತಂದೆಯ ಕೂಡೆ ಅತಿ ದ್ವೇಷವನು ಮಾಡುವೇ । ಪ್ರತ್ಯೇಕ ವಂಟಿಯಲಿ ವಗತನದಿ ಮನೆವಳಗೆ ನಿಗ್ರಹವ ಮಾಡುವೇ ॥ ಕಥೆ ಪುರಾಣ ಶ್ರವಣಮಾಡುವರ ಬಳಿಘೋಗಿ ಪ್ರತಿಭಂಡ ಮಾತಾಡುವೇ । ಚಿತ್ತಜನ ಪಡದಂಥ ಅಚ್ಯುತನೆ ಲಾಲಿಸೊ ಕುಚ್ಛಿತಬುದ್ಧಿಗಳ ಬಿಡಿಸೋ ದೇವಾ ॥ ೩ ॥ ಇರುಳು ಹಗಲು ಮನಸಿನೊಳು ಕ್ಷುದ್ರ ಮಾತಿನ ಧ್ಯಾನ ಹರಿಯೆಂದು ಸ್ಮರಿಸಲಿಲ್ಲ । ಧರಧರಕ ಪರರಂಗನೆಯರ ಚೆಲುವಿಕೆ ಕಂಡು ಬಿದ್ಧೊರಳೆ ಕೆಟ್ಟೆನಲ್ಲ ॥ ಹೊರವರು ಯೆನ್ನ ಮುಪ್ಪತ್ತೆರಡು ಮಂದಿಗಳ ಗುರಿಗೆ ಬಲಿಯಾದೆನಲ್ಲ । ಶ್ರೀರಮಣ ಕ್ಷಮಿಸಯ್ಯ ಸರ್ವಾಪರಾಧಗಳು ನಿನ್ನ ಕಿಂಕರನೆನಿಸೋ ॥ ೪ ॥ ಕೆಟ್ಟ ಅಜಮಿಳಗೆ ನೀ ಕೊಟ್ಟೆ ಮುಕುತಿಯ ಬೇಗ ಕಾಯಿದೆ ದ್ರೌಪದಿ ಮಾನವ । ಸೃಷ್ಟೀಶ ನೀನರಿಯ ಅವರ ಸರಿ ಆಗುವೆನೆ ದಾಸಾನುದಾಸ ನಾನು ॥ ಇಟ್ಟು ನಿಮ್ಮ ಪಾದವಡಿಯಲ್ಲಿ ಕಲಕಾಲ ಮನಯಿಡಂತೆ ಮಾಡಲಿನ್ನ । ಸಟೆಯನಾಡುವನಲ್ಲ ಪುರಂದರವಿಠಲ್ಲ ಧಡ ಸೇರಿಸೋ ಯೆನ್ನನು ದೇವಾ ॥ ೫ ॥ ಶ್ರೀಃ ।

## ೫೨. ರಾಗ ಮೋಹನ, ಅಟತಾಳ.

ನಿನ್ನ ದಿವ್ಯ ಮೂರುತಿಯ ಕಣ್ಣಾದಣಿಯ ನೋಡಿ । ಧನ್ಯನಾದೆನೊ ಧರೆಯೊಳು ॥ ಪಲ್ಲ ॥ ಇನ್ನು ಈ ಭವಭಯವ ಅಂಜಲ್ಯಾತಕೊ ಚನ್ನ ಶಿರಿವೆಂಕಟೇಶಾ । ಶ್ರೀಶಾ ॥ ಅನುಪಲ್ಲ ॥ ಏನು ಜನ್ಮದ ಪುಣ್ಯ

ಬಂದೊದಗಿತೋ ಶ್ರೀಸ್ವಾಮಿಪುಷ್ಕರಣಿ । ಯೋಳ್ಸ್ನಾನ ಜಪತಪ ಮಾಡಿ ವರಹದೇವರ ನೋಡಿ ಶ್ರೀಸ್ವಾಮಿ ಮಹಾದ್ವಾರಕೆ ॥ ಈ ಶರೀರ ವನು ಈಡ್ಯಾಡಿ ಪ್ರದಕ್ಷಿಣೆ ಮಾಡಿ ಲೇಶದಿಂ ಪೊಗಳುತಲಿ । ಆ ಸುವ ರ್ಣದ ಗರುಡಕಂಭವನೆ ನೋಡಿ ಸಂತೋಷದಿಂ ಕೊಂಡಾಡಿದೇ । ಬಿಡದೇ ॥ ೧ ॥ ನೆಟ್ಟನೆರಡನೇ ದ್ವಾರವನೆ ದಾಂಟಿ ಪೋಗುತಲಿ ದಟ್ಟ ಣೆಯು ಬಹು ಜನದಲಿ । ಘಟ್ಟಿ ಮನದಲಿ ತಲಿಯ ಚೆಟ್ಟಿಡುತ ನೆಟ್ಟನೇ ಕಟ್ಟಾಂಜನಕೆ ತಾ ಬರುತಲಿ ॥ ಕೃಷ್ಣಾಜಿನದವರ ಪೆಟ್ಟಿಗಳ ಕಾಣುತಲಿ ಕಂಗೆಟ್ಟು ಹರಿಯೆನುತಲಿ । ಜಿಟ್ಟಿದಧಿಪತಿ ನಿನ್ನ ದೃಷ್ಟಿಂದ ಕಾಣುತಲಿ ಸುಟ್ಟಿತೆನ್ನಯ ದುರಿತವು । ಸರ್ವ ॥ ೨ ॥ ಶಿರದಲ್ಲಿ ರವಿಕೋ ಟಿತೇಜದಿಂದೆಸಪಂಥ ವರ ಕಿರೀಟವು ಕುಂಡಲ । ಕೊರಳೊಳಿಹ ಸರಿಗೆ ವೈಜಯಂತಿಯು ಮಾಲೆ ಪರಿಪರಿಯ ಹಾರಗಳನು ॥ ಉರದಿ ಶ್ರೀವತ್ಸ ವನು ಕರದಿ ಶಂಖಚಕ್ರಗಳು ವರನಾಭಿ ಮಾಣಿಕವನು । ನಿರುಪಮ ಮಣಿಖಚಿತ ಕಟಿಸೂತ್ರ ಪೀತಾಂಬ್ರ ಚರಣದ್ವಯದಂದಿಗೆಯನು । ಇನ್ನು ॥ ೩ ॥ ಇಕ್ಷುಚಾಪನ ಪಿತನೆ ಪಕ್ಷೀಂದ್ರವಾಹನನೆ ಲಕ್ಷ್ಮೀಪತಿ ಕಮಲಾಕ್ಷನೇ । ಅಕ್ಷಯ ಅಜಸುರೇಂದ್ರಾದಿ ವಂದಿತನೆ ಸಾಕ್ಷಾಜ್ಜಗ ನ್ನಾಥನೆ ॥ ರಾಕ್ಷಸಾಂತಕನೆ ನಿರಪೇಕ್ಷ ನಿತ್ಯತೃಪ್ತನೆ, ನಿರುಪಮಯ ನಿಸ್ಸೀಮನೇ । ಕುಕ್ಷಿಯೊಳಗೀರೇಳು ಲೋಕವನು ತಾಳ್ದವನೆ ರಕ್ಷಿಸುವ ದೆಂದು ದಯದೀ । ಮುದದೀ ॥ ೪ ॥ ಉರಗಗಿರಿ ಅರಸು ನಿಮ್ಮ ಚರಣ ಗಳು ಕಂಡ ಮೇಲೆ ಉರಗ ಕರಿ ವ್ಯಾಘ್ರ ಸಿಂಹ । ಅರಸು ಚೋರಾಗ್ನಿ ವೃಶ್ಚಿಕ ಮೊದಲಾದ ಪರಿಪರಿಯ ಬಹಳ ಭಯವು ॥ ಪರಮ ವಿಷ ಲಂಪಟದೊಳಗೆ ನಾ ಸಿಗದಂತೆ ಕರುಣಿಸುವದೊಲಿದು ದಯದಿ । ಸ್ಮರ ಗಧಿಕಲಾವಣ್ಯ ತಂದೆ ಪುರಂದರವಿಠಲ ಶರಣಜನ ಕರುಣಾರ್ಣವ । ದೇವಾ ॥ ೫ ॥ ಶ್ರೀಃ ॥

### ೫೩. ರಾಗ ಆನಂದಭೈರವಿ, ಛಾಪುತಾಳ.

ನಿನ್ನ ನಂಬಿದೆ ನೀರದಶ್ಯಾಮ ॥ ಪಲ್ಲ ॥ ಎನ್ನ ಪಾಲಿಸೊ ಸೀತಾ ರಾಮಾ ॥ ಅನುಪಲ್ಲ ॥ ಪಾರವಿಲ್ಲದ ಸಂಸಾರವು ಪಾರವಾರಿಧಿಯೊಳು

ಮುಣುಗಿದೆ ನಾನು । ನಾರಿಸುತರು ತನ್ನವರೆಂದು ಭ್ರಾಂತಿಯುಲಿ ಬಿದ್ದು
ನೊಂದೆನೋ ಹರಿಯೇ ॥ ೧ ॥ ವೇದಶಾಸ್ತ್ರಂಗಳು ಓದಿ ವಾದಿಸಿ ಬಲು
ಜನ್ಮ ಬಳಲಿದೆ ನಾನು । ಆದಿಮೂರುತಿ ಪಾದವನ್ನು ಅನುಸರಿಸದೆ
ಲೋಕರಂಜಿತನಾದೆ ॥ ೨ ॥ ಆರು ಗರ್ವಗಳು ಕೂಡಿ ಬರಿದೆ ಇಂದ್ರಿಯ
ತಾನೆಲ್ಲ ನೋಡಿ । ತೋರಿದೆ ಹರಿದಾಸನೆಂದು ಗಾರುಡ ಮಾಡಿ ನಾ
ಕಾಲವ ಕಳದೆ ॥ ೩ ॥ ಪರಸತಿ ಪರದ್ರವ್ಯಗಳನು ಪರನಿಂದೆ ಪರದ್ರೋಹ
ಗಳನೆ ಮಾಡಿದೆನೋ । ದುರಿತಪರ್ವತವೆತ್ತಿದೆನೊ ಸ್ಥಿರವಾದ ತನು
ವೆಂದು ಮರಣ ಜರಿದೆನೊ ॥ ೪ ॥ ಬಂದೆನೊ ಬಹು ಜನ್ಮದಲ್ಲಿ ನೊಂ
ದೆನೋ ವಿಷಯದ ಬಾಧೆಗಳಲ್ಲಿ । ಮುಂದೇನು ಗತಿ ಎನಗಿಲ್ಲ ತಂದೆ
ನೀನಲ್ಲದೆ ಪುರಂದರವಿಠಲ್ಲ ॥ ೫ ॥ ಶ್ರೀ ॥

## ೫೪. ರಾಗ ಕಾಪಿ, ಝಾಪುತಾಳ.

ನೀನಿರಲು ನಮಗ್ಯಾತರ ಭಯವೋ ॥ ಪಲ್ಲ ॥ ಸನಕಾದಿಗಳ ಪ್ರಿಯ
ತಿರುವೇಂಗಳಯ್ಯ ॥ ಅನುಪಲ್ಲ ॥ ಚರಣದಿಂದುದಿಸಿದವಳ ಸುತನ
ಮಮ್ಮನ ಸತಿ । ಭರದಿಂದ ನಿಮ್ಮ ಸ್ತೋತ್ರವ ಮಾಡಲು ॥ ಹರುಷ
ದಿಂದ ಕೇಳಿ ನಲಿದು ದೈವನ । ನಾರಿ ಲಜ್ಜೆಯ ಕಾಯಿದ ಕರುಣಾ
ದಯಾಸಿಂಧು ॥ ೧ ॥ ಕ್ಷುಧೆಯಿಂದ ಬಂದ ಅಗಸ್ತ್ಯಮುನಿ ಶಾಪದಲಿ ।
ಮದಯುಗನಾಗಿ ತಾನು ಗಜನಾಗಿರೆ ॥ ಅಘಟವಾಗಿದ್ದ ನೆಗಳಿಗೆ ಶಿಲ್ಕಿ
ಘೇಸಿಸಲು । ನಿಜ ಚಕ್ರದಲಿ ಕಾಯಿದ ಗಜರಾಜವರದಾ ॥ ೨ ॥ ನೀರು
ಬೊಬ್ಬಳಿಯಂತೆ ನಿತ್ಯವಲ್ಲವೋ ದೇಹ । ಘೋರಸಂಸಾರದೊಳು ತೊಳ
ಲಬೇಡಾ ॥ ಶ್ರೀರಮಣ ಪುರಂದರವಿಠಲ ಪರದೈವವೆಂದು । ಸಾರುತಿ
ರಲು ಮನವೆ ಸುಮ್ಮನಿರಲುಬೇಡಾ ॥ ೩ ॥ ಶ್ರೀ ॥

## ೫೫. ರಾಗ ಯಮುನಾಕಲ್ಯಾಣಿ, ಅಟತಾಳ.

ಪನ್ನಗಾದ್ರಿಪತಿ ನಮಗೆ ನೀ ಗತಿ । ಯೆಂಬುವ ಮತಿ ಅರಿತು ಈ ಸ್ಥಿತಿ ॥
ವೈಕುಂಠವಾಸ ವರಮಂದಹಾಸ । ಭಕ್ತವುಲ್ಲಾಸ ಲಕ್ಷ್ಮೀವಿಲಾಸ ॥ ೧ ॥

ಮಾನವವೇಷ ಮಂಜುಳಭಾಷ । ವಿನುತವಿಶೇಷ ಕೌಸ್ತುಭಭೂಷ ॥ ॥ ೨ ॥ ಶಂಕಿಸುತಿರಲು ಸಾಕುವ ಬಾಲಾ । ಸಂಖೆಯು ಬಲ್ಲ ಪುರಂದರ ವಿಠಲ್ಲಾ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೫೬. ರಾಗ ಶಂಕರಾಭರಣ, ಝಂಪೆತಾಳ.

ಪಂಚಮಹಾಪಾತಕಗೆ ಯೆಂತು ಬುದ್ಧಿಯ ಪೇಳೆ ತನ್ನ । ವಂಚನೆ ಯಿಂದಲಿ ತನಗೆ ತಾನೆ ಕೆಟ್ಟುಹೋಹನಲ್ಲದೆ ॥ ಪಲ್ಲ ॥ ಊರೆಲ್ಲ ತೊಳೆ ದರೆ ಮಶಿ ಬೆಳ್ಳಗಾಗುವದೆ । ನೀರೊಳಗಿನ ಕಲ್ಲು ಮೃದುವಾಗಬಲ್ಲದೆ ॥ ಧಾರುಣಿವಳಗೊಬ್ಬ ಮೂರ್ಖನಿಗೆ ಬುದ್ಧಿಯನ್ನು । ಆರಾರು ಪೇಳಿದರೆ ಅವ ಕೇಳಬಲ್ಲನೆ ॥ ೧ ॥ ಹಾವಿನ ಮರಿಯ ತಂದು ಹಾಲು ನೆರದು ಸಾಕಿದರೆ । ಬಾಯಿ ವಳಗಿನ ವಿಷವ ತಾ ಮಾಣಬಲ್ಲದೆ ॥ ನಾಯಿ ಕುನ್ನಿಯ ತಂದು ಜ್ಞಾನವನ್ನು ಹೇಳಿದರೆ । ಕಾಲು ಕಚ್ಚುವ ವಿದ್ಯವ ಬಿಡಬಲ್ಲದೆ ॥ ೨ ॥ ಕತ್ತೆಮರಿಯನೆ ತಂದು ಗಾನವನ್ನೆ ಹೇಳಿದರೆ । ವಿಸ್ತರಿಸಲದು ಮತ್ತೆ ಕೇಳುವರ ಬಲ್ಲದೆ ॥ ಹಿತ್ತಲ ತುರುಚಿಯ ತಂದು ಪನ್ನೀರನೆರದರೆ । ಒತ್ತಿದವರ ಹರಿಕೊಂಡು ತಿಂಬೋದು ಬಿಡಬಲ್ಲದೆ ॥ ॥ ೩ ॥ ಹಂದಿಯ ಮರಿಗೆ ಶ್ರೀಗಂಧವ ಪೂಸಿದರೆ । ಸಂದುಗೊಂದಿನ ಜೈಕೆ ಬಿಡಬಲ್ಲದೆ ॥ ಮಂದವಾಗಿಹ ಗಜವ ತಂದು ಬುದ್ಧಿಯ ಹೇಳೆ । ಎಂದಿಗಾದರು ಜಾಗ್ರತೆಯು ಪುಟ್ಟಬಲ್ಲದೆ ॥ ೪ ॥ ಹುಟ್ಟು ಕುರುಡನ ಕೈಯ್ಯ ಕನ್ನಡಿಯ ಕೊಟ್ಟರೆ । ಮುಟ್ಟಿ ತನ್ನಂಗವನು ನೋಡಿಕೊಳ್ಳ ಬಲ್ಲನೆ ॥ ಸೃಷ್ಟಿಯೊಳ್ಪುರಂದರವಿಠಲನ ದಾಸರ । ಕಷ್ಟಪಡಿಸಿದವರು ಕೆಟ್ಟುಹೋಹೋರಲ್ಲದೆ ॥ ೫ ॥ ಶ್ರೀಃ ॥

## ೫೭. ರಾಗ ಆನಂದಭೈರವಿ, ಛಾಪುತಾಳ.

ಪಾವನ ನವಪಾವನ ನವಪಾವನ ನವಜಗಕೆ ॥ ಪಲ್ಲ ॥ ತುಳಸಿ ನಡೆ ಕೈ ಪಾವನ ದಳವೊಂದಿಡೆ ಕಿವಿ ಪಾವನ । ಸ್ಥಳದ ಮೃತ್ತಿಕೆಯಿಡಲು ಫಣೆಯು ಪಾವನವು ॥ ೧ ॥ ಬೆಳದ ಬೃಂದಾವನವ ಬಳಸಿ ಬಂದವ

ಪಾವನ । ತುಳಸಿತೀರ್ಥವ ತಕೊಂಡಾತನ ತನುವು ಪಾವನವೂ ॥ ೨ ॥ ಏಕಾದಶಿವ್ರತ ಪಾವನ ಯೆಲ್ಲಾ ತೊರದವ ಪಾವನ । ನಾಲ್ಕು ಝಾಮದ ಜಾಗರಣೆಯಿರಲು ಪಾವನವೂ ॥ ೩ ॥ ಸಾಮವೇದವು ಪಾವನ ಭೂಮಿಪತಿ ಸೀ ಪಾವನ । ನಾಮಸ್ಮರಣೆಯು ಪಾವನ ನಾರಾಯಣನ ॥ ೪ ॥ ತಾಹೊನ್ನೂರಿ ಸರ್ವೋತ್ತಮನೆಂಬೊ ಶೀಮೆಯು ಪಾವನ ಪುರಂದರವಿಠಲನು ಇರುವ ಭೂಮಿ ಪಾವನ ॥ ೫ ॥ ಶ್ರೀ ॥

## ೫೮. ರಾಗ ಧನ್ಯಾಸಿ. ಆದಿತಾಳ.

ಪಿಂಡಾಂಡದೊಳಗಿನ ಗೆಂಡನ ಕಾಣದೆ । ಮುಂಡೇರಾದರು ಪಂಡಿತರು ॥ ಪಲ್ಲ ॥ ಕುಂಡಲಿಶಯನ ಪದಪುಂಡರೀಕವನು ಹೃ । ತ್ಪುಂಡರೀಕದೊಳು ಕಂಡು ಭಜಿಸದೆ ॥ ಅನುಪಲ್ಲ ॥ ಆಧಾರ ಮೊದಲಾದ ಆರು ಚಕ್ರ ಮೀರಿ । ನಾದಬಿಂದು ಕಳೆಯದ ಬಳಿಕ ॥ ಶೋಧಿಸಿ ಸುಧೆಯ ಪ್ರಸಾದವನುಣದೆ । ವಾದಿಸಿ ಸಭೆಯೊಳು ಒಂದನು ತಿಳಿಯದೆ ॥ ೧ ॥ ನಾದದೊಳಗೆ ಸುನಾದದಿ ಓಂಕಾರ । ಪದವ ಚಿತ್ತ ಪರಿಣಾಮಯಾಗದೆ ॥ ವೇದಾಂತರೂಪ ತದ್ರೂಪ ಚಿದ್ರೂಪವ । ಓದಿಸಿ ಮನದೊಳು ಒಂದನು ಅರಿಯದೆ ॥ ೨ ॥ ನವನಾದ ಮಧ್ಯದಿ ಪವನ ಸುತ್ತಿ ಫಣಿ ಶಿವನ ತ್ರಿಪುಟದಿ ಸ್ಥಿರವಾಗದೆ ॥ ಭವರೋಗವೈದ್ಯನ ಧ್ಯಾನವ ಮಾಡಿ ಸವಭುಕು ಶ್ರೀಪುರಂದರವಿಠಲನ ಸ್ಮರಿಸದೆ ॥ ೩ ॥ ಶ್ರೀ ॥

## ೫೯. ರಾಗ ಆನಂದಭೈರವಿ, ಅಟತಾಳ.

ಬಂದೆ ರಂಗಯ್ಯ ನಿನ್ನ ಬಳಿಗೆ ॥ ಪಲ್ಲ ॥ ಎಲ್ಲಿಹೋದರು ಸುಖವಿಲ್ಲವ । ರೆಲ್ಲರ ಸೇವೆಯ ಮಾಡಬೇಕೆಲ್ಲ ॥ ಒಳ್ಳೆದಾಯಿತು ಯೆಂಬೋರಿಲ್ಲ । ರಂಗ ಎ । ನ್ನಲ್ಲಿ ತಪ್ಪುಗಳೆಣಿಸುವರೆಲ್ಲ ॥ ೧ ॥ ಕಸಮುಸರೆಯ ಮಾಡಲಾರೆ ।...॥ ಸೊಸೆಯು ಮಗನ ಮಾತು ಜೇರೆ । ಇಂಥಾ । ಹಸಗೆಟ್ಟ ಸಂಸಾರ ನಾ ಮಾಡಲಾರೆ ॥ ೨ ॥ ಸೊಂಟಬೇರಿಗೆ ಕಾಸಿಲ್ಲ । ಎನಗೆ ಸೊಟ್ಟಾದ ನೋವು ಘನವಾಯಿತಲ್ಲ ॥ ಕಂಠಕ್ಕೆ ಬಂದವೆಯೆಲ್ಲ । ಕೃ

ಇಟ್ಟು ರೊಕ್ಕಗಳಿಂದು ಕೊಡುವವರಿಲ್ಲ ॥ ೩ ॥ ಇಷ್ಟ ಕಡೆ ಇರಲಿಸರು । ಅಲ್ಲಿಂ । ದೆದ್ದು ಬಂದರೆ ಸಿಟ್ಟಿಗಾರರು ಬಿಡರು ॥ ಮಧ್ಯಾಹ್ನಕ್ಕನ್ನದ ತೊಡರು । ಒಂ । ದು ಮುಡ್ಡು ಕೇಳಿದರ್‍ಯಾರು ಸಾಲವ ಕೊಡರು ॥ ೪ ॥ ಸೋಮವಾರದ ವ್ರತವೆನಗೆ । ಒಂದು । ದೀವಿಗೆ ಹಚ್ಚಲು ಥರವಿಲ್ಲ ವಲ್ಲ ॥ ಭಾವಿಸಿ ನೋಡುವರಿಲ್ಲ । ನಮ್ಮ । ಸ್ವಾಮಿ ಪುರಂದರವಿಠಲನೇ ಬಲ್ಲ ॥ ೫ ॥ ಶ್ರೀ ॥

## ೬೦. ರಾಗ ಕೇದಾರಗೌಳ, ಆದಿತಾಳ.

ಬಾ ಬಾ ರಂಗ ಭುಜಂಗಶಯನ ಕೋಮಲಾಂಗ ಕೃಪಾಪಾಂಗಾ ॥ ॥ ಪಲ್ಲ ॥ ಬಾ ಬಾ ಎನ್ನಂತರಂಗ ಮಲ್ಲರ ಗಜಸಿಂಗ ದುರಿತಭವಭಂಗಾ ॥ ॥ ಅನುಪಲ್ಲ ॥ ಉಭಯಕಾವೇರಿಯ ಮಧ್ಯನಿವಾಸ । ಅಭಯದಾಯಕ ಮಂದಹಾಸ ॥ ಸಭೆಯೊಳು ಸತಿಯಳ ಕಾಯಿದ ಉಲ್ಲಾಸ । ಇಭವರ ದನೆ ಶ್ರೀನಿವಾಸಾ ॥ ೧ ॥ ಏಳು ಪ್ರಾಕಾರದ ಮಾಳಿಗೆ ಮನೆಯೊಳು । ಫಾಳಿನ ದೇವರ ದೇವ ॥ ಸೋಳಸಾಸಿರ ಗೋಪಿಯರಾಳಿದ ಈ । ರೇಳು ಲೋಕದ ಜನ ಕಾವಾ ॥ ೨ ॥ ಚಂದ್ರಪುಷ್ಕರಣಿಯ ತೀರವಿಹಾರ । ಇಂದ್ರಾದಿ ಸುರಪರಿವಾರ ॥ ಚಂದ್ರಶೇಖರನುತನಾದ ಸುಖ । ಸಾಂದ್ರ ಸುಗುಣ ಗಂಭೀರ ॥ ೩ ॥ ಈಷಣ ತ್ರಯಗಳ ದೂಷಿತ ನಿರುತ । ಅಶೇಷ ವಿಭವ ಜನಪಾಲಾ ॥ ಭೂಷಿತ ನಾನಾ ವಸ್ತ್ರಾಭರಣಾ ವಿ । ಭೀಷಣ ಗೊಲಿದ ಸುಪ್ರಾಣ ॥ ೪ ॥ ಶಂಬರಾರಿಯ ಪಿತ ಡಂಭರಹಿತ ಮನ । ಅಂಬುಜದಳನಿಭ ನೇತ್ರ ॥ ಕಂಬುಚಕ್ರಧರ ಪುರಂದರವಿಠಲ । ತುಂ ಬುರು ನಾರದ ಕೃತ ಸ್ತೋತ್ರ ॥ ೫ ॥ ಶ್ರೀ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೬೧. ರಾಗ ಮೋಹನ, ಝಂಪೆತಾಳ.

ಬೇಡ ಪರಸತಿ ಸ್ನೇಹ ಭ್ರಷ್ಟನಾದ್ಯೋ ಮನುಜ । ನೋಡಿಕೋ ನೊಂದವರನು ॥ ಪಲ್ಲ ॥ ಧರಣಿಯೊಳಗೆ ಜಲಂಧರನು ಗೌರೀಗಣಿಕಿ ಹರನಿಂದ ಹತವಾದನು । ಮೂರುಲೋಕವ ಗೆದ್ದ ಮೂಢ ರಾವಣ ಬಿದ್ದ

ಹೀನ ಕೀಚಕನು ಕೆಟ್ಟಾ । ಭ್ರಷ್ಟಾ ॥ ೧ ॥ ಕಾಕಾಸುರನ ನೋಡು ಏಕಾಕ್ಷಿಯಾದನು ಪಾಕಶಾಸನನ ನೋಡು । ಆಕಾಶದಲಿ ಚಂದ್ರನಾ ಕಾರವನೆ ನೋಡು ಯಾಕಲ್ಪಕಿನ್ನು ಬಿಡದು । ಕೆಡದು ॥ ೨ ॥ ಸಾರದಲಿ ಸತ್ಸಂಗಿರಲು ದೂರ ದುತ್ಸಂಘೋಗಿ ಪೂರೈಸು ಪುಣ್ಯಫಲದಿ । ಸೇರಿದ ಪಾಪ ಪರಿಹಾರಮಾಡುವ ನಮ್ಮ ಧೀರ ಪುರಂದರವಿಠಲ ಕರುಣದಲಿ । ಪೊರೆವ ॥ ೩ ॥ ಶ್ರೀಃ ॥

## ✓೬೨. ರಾಗ ಭೈರವಿ, ಆದಿತಾಳ.

ಬ್ರಾಹ್ಮಣನೆಂದರೆ ಬ್ರಹ್ಮನ ತಿಳಿದವ ಅವನೀಗ ಬ್ರಾಹ್ಮಣನೋ ॥ ॥ ಪಲ್ಲ ॥ ಬ್ರಹ್ಮ ಭೇದವೆಂಬು ಜಗವನ್ನು ಕಂಡವ ಅವನೀಗ ಬ್ರಾಹ್ಮಣನೋ ॥ ಅನುಪಲ್ಲ ॥ ಮೂಗಲ್ಲಿ ವಾಯು ತುಂಬಿ ತುಂಬಿ ಯೆಳಿಯೋವ ಅವನೀಗ ಬಾಹ್ಮಣನೋ । ನಾಗಸ್ವರನೆ ಧ್ವನಿ ಕಿವಿಯಲ್ಲಿ ಕೇಳೋವ ಅವನೀಗ ಬ್ರಾಹ್ಮಣನೋ ॥ ಬೇಗನೆ ನೆಲೆನೆಲೆ ಆರುನ್ನು ಅಡರೋವ ಅವನೀಗ ಬ್ರಾಹ್ಮಣನೋ । ವೇಗದಿಂದಲಿ ಚಂದ್ರಮಂಡಲದಮೃತವ ನುಂಡವ ಬಾಹ್ಮಣನೋ ॥ ೧ ॥ ಮುತ್ತಿನಂದದಿ ಮಳೆಹನಿ ಉದುರು ವಾಗ ತೊಗದವ ಬ್ರಾಹ್ಮಣನೋ । ಮತ್ತೆ ದ್ವಿದಳದ ಸಿಂಹಾಸನದಲ್ಲಿ ಕುಳಿತವ ಬ್ರಾಹ್ಮಣನೋ ॥ ಎತ್ತೆತ್ತ ನೋಡಲು ಸೂಸು ಬೆಳದಿಂಗಳು ಕಾಣೋವ ಬ್ರಾಹ್ಮಣನೋ । ಉತ್ತಮ ಸಹಸ್ರ ಕಮಲ ಗರಿಕೆಯಲ್ಲಿ ಸೇರೋವ ಬ್ರಾಹ್ಮಣನೋ ॥ ೨ ॥ ಥಳಥಳಿಸುವ ಬ್ರಹ್ಮರಂಧ್ರವೆ ಸುಖ ವೆಂದು ಮಲಗುವ ಬ್ರಾಹ್ಮಣನೋ । ಬಲುರವಿ ಶತಕೋಟಿ ಶಿಂಶುಮಾ ರದಲ್ಲಿ ಸೇರೋವ ಬ್ರಾಹ್ಮಣನೋ ॥ ಕಲಿಯುಗದಲಿ ಹರಿನಾಮದ ಅಮೃತವನುಂಡವ ಬ್ರಾಹ್ಮಣನೋ । ಸುಲಭದಿ ಪುರಂದರವಿಠಲರಾ ಯನ ಸೇರೋವ ಬ್ರಾಹ್ಮಣನೋ ॥ ೩ ॥ ಶ್ರೀಃ ॥

## ೬೩. ರಾಗ ಬೇಹಾಗ್, ಆದಿತಾಳ.

ಬೈಲಿಗೆ ಬೈಲಾಗಿತು ಬೈಲೊಳಗೆ ॥ ಪಲ್ಲ ॥ ಸೂತ್ರದ ಬೊಂಬೆಯು ಮಾಡಿ ಹರಿ ಸೂತ್ರದಿಂದ ಕುಣಿಸ್ಯಾಡಿ । ಸೂತ್ರ ಕಡಿಯಿತು ಬೊಂಬೆ

ಮುರಿಯಿತು ಆಟ ನಿಂತಿತು ಕೇಳೋ ಮನುಜಾ ॥ ೧ ॥ ಚಂದಾಗಿ ಜ್ಯೋತಿಯು ಬೆಳಗಿ ಎಣ್ಣೆಯು ಬತ್ತಿಯು ಹಾಕಿ । ಎಣ್ಣೆ ಮುಗಿಯಿತು ಬತ್ತಿ ಕಡಿಯಿತು ಕತ್ತಲು ಆಯಿತು ಕೇಳೋ ಮನುಜಾ ॥ ೨ ॥ ನೆಂಟರಿಷ್ಟರು ಕೂಡಿ ಅವರು ಸಂತೆಗೋಸ್ಕರವಾಗಿ । ಸಂತೆ ಮುಗಿಯಿತು ಚಿಂತೆ ಹತ್ತಿತು ಭ್ರಾಂತಿ ಆಯಿತು ಕೇಳೋ ಮನುಜಾ ॥ ೩ ॥ ಬಾಲೆ ಒಬ್ಬಳು ಕೂಡಿ ಅವಳು ನೀರಿಗೋಸ್ಕರ ಪೋಗಿ । ನೀರು ತುಂಬಿತು ಕಾಲು ಜಾರಿತು ಕೊಡವು ಒಡೆಯಿತು ಕೇಳೋ ಮನುಜಾ ॥ ೪ ॥ ಪರಿಪರಿ ವಿಧದಲಿ ನಾನು ಪರಮಾತ್ಮನ ಸ್ತುತಿಯು ಮಾಡಿ । ಪರಮಮೂರುತಿ ಪುರಂದರವಿಠಲನೆ ಕರುಣಿಸೋ ಪಾಲಿಸೋ ಪರಮದಯಾಳೋ ॥ ೫ ॥ ಶ್ರೀಃ ॥

## ೬೪. ರಾಗ ಮುಖಾರಿ, ಝಂಪೆತಾಳ.

ಭಾಷೆಹೀನರ ಸಂಗಭಿಮಾನಭಂಗ ॥ ಪಲ್ಲ ॥ ಹಶಿವಿಗ್ಯಾರದೆ ಬೆಕ್ಕು ಹತ್ತಿಯನು ಮೆದ್ದಂತೆ । ತೃಷಿವಿಗ್ಯಾರದೆ ಕೂಪ ತೋಡಿದಂತೆ ॥ ಬಿಸಿಲಿಗ್ಯಾರದೆ ಕೋತಿ ಬಂಡೆಮೇಲೆ ಕೂತಂತೆ । ಕುಸುಮಿಯ ಹೊಲದೊಳಗೆ ಕಳಪೊಕ್ಕನಂತೆ ॥ ೧ ॥ ಮಳೆಯ ರಬ್ಬಸಕಂಜಿ ಜಲದೊಳಗೆ ಪೊಕ್ಕಂತೆ । ಚಳಿಯ ರಬ್ಬಸಕೆ ಮರಯೇರಿದಂತೆ ॥ ಹುಳವಿನ ಭಯಕಂಜಿ ಹುತ್ತದೊಳು ಪೊಕ್ಕಂತೆ । ಯಳನಿರಿ ವಂಟೆಯ ತುಟಿಗೆ ಜೋತಂತೆ ॥ ೨ ॥ ಸರಸ ನಾರಿಯ ವೇಷ ಪುರುಷ ನಾರಿಯ ಗಮನ ಬಿಸಿಲುಕುದುರೆಯ ಭಾಮ ಯೆಂದೆನಿಸದೆ ॥ ವಸುಧೀಶ ಪುರಂದರವಿಠಲನೇ ಕಾಯಿ ನಮ್ಮ । ಹೆಸವ ನಾಮವ ಭಜಿಸಿ ಸುಖಿಯಾಗೋ ಮನವೇ ॥ ೩ ॥ ಶ್ರೀಃ ॥

## ೬೫. ರಾಗ ಸೌರಾಷ್ಟ್ರ, ಆದಿತಾಳ.

ಮಂಡೆ ಬೋಳಾದ ಸನ್ಯಾಸಿಯು ಮನೆಬಂಧೊಕ್ಕನಮ್ಮ ॥ ಪಲ್ಲ ॥ ಎನ್ನ ಗಂಡನ ಕಿವಿವೂದಿ ಮರುಳುಮಾಡಿ ಮನೆಗೊಂಡನಮ್ಮ ॥

॥ ಅನುಪಲ್ಲ ॥ ಮಡಿಯು ಮಾಡಿ ನೈತೊಳದು ನಾವುಣ್ಣಲಾರೇವಮ್ಮ। ನಡತೆ ತಪ್ಪಿತೆಂತೊಬ್ಬರು ನಮ್ಮನು ದಂಡಿಸಿದ್ದಿಲ್ಲವಮ್ಮ ॥ ನುಡಿಯಲಿ ಷ್ಟೆಂದು ವೈಷ್ಣವತನ ಬೇಸರವಿಟ್ಟಿತಮ್ಮ । ಕಡುಮೂರ್ಖ ಸನ್ಯಾಸಿ ಬಂದಿವು ಬಿಡಿಸಿದ ನೋಡಿರಮ್ಮ ॥ ೧ ॥ ಮುತ್ತೈದೇರು ನಾವು ಹಣೆ ತುಂಬ ಕುಂಕುಮ ಇಡವೇವಮ್ಮ । ನಾವು । ಎತ್ತ ಹೋದರೆ ತುತ್ತು ಬುತ್ತಿಯ ಕೊಂಡ್ಯೊದು ಉಂಬೇವಮ್ಮ ॥ ತೊತ್ತುಬಂಟರ ಸೀರಲ್ಲದೆ ಮತ್ತೊಂದು ಅರಿಯೇವಮ್ಮ । ಈ । ನ್ಯೃತ್ಯುಸನ್ಯಾಸಿ ಬಂದಿವುನೆಲ್ಲ ಬಿಡಿಸಿದ ನೋಡಿರಮ್ಮ ॥ ೨ ॥ ಬೆಳ್ಳುಳ್ಳಿ ನುಗ್ಗೆಕಾಯಿ ಕವಡಿಕಾಯಿ ಗಳು ತಿಂಬೇವಮ್ಮ। ಮುಲ್ಲಂಗಿಪಲ್ಲೆ ಗೆಜ್ಜರಿಪುಂಡೆಪಲ್ಲೆವು ಸಾಲವಮ್ಮ॥ ಸುಳ್ಳು ಯಾಕಾಡಲಿ ಗಂಡಸರು ತಂಗಳುಂಬೋರಮ್ಮ । ಇಲ್ಲಿಗೆ ಆಯಿ ತೆಮ್ಮಾಚಾರವೆನಬೇಡಿ ಕೇಳಿರಮ್ಮ॥ ೩ ॥ ಏಕಾದಶಿದಿನ ಅವರಿಗುಗ್ಗರಿ ಗಳು ತಿಂಬೇವಮ್ಮ। ಮೇಲೆ । ಬೇಕಾದರೆ ನಾಲ್ಕು ದೋಸೆಯ ಮಾಡಿ ತಿಂಬೇವಮ್ಮ॥ ಸಾಕಾಗದಿದ್ದರೆ ಮೊಸರು ಮಜ್ಜಿಗೆಗಳು ಕುಡಿವೇವಮ್ಮ ಈ । ಕಾಕು ಸನ್ಯಾಸಿ ಬಂದವನೆಲ್ಲ ಬಿಡಿಸಿದ ನೋಡಿರಮ್ಮ ॥ ೪ ॥ ಹಸನಾದ ಪರ್ವಕಾಲಗಳಲಿ ಪತಿಸಂಗವಹುದಮ್ಮ । ಬಸುರಾದರು ಎನ್ನ ಪ್ರಸವಾಗೊ ಪರಿಯಂತ್ರ ಬಿಡನೇಯಮ್ಮ॥ ಹುಸಿಯಿನ್ಯಾಕಾಡಲಿ ಗಂಡಸುತನ ಘಟ್ಯಾಗಿಹುದಮ್ಮ। ಅದರ। ದೆಶೆಯಿಂದ ನಾಲ್ಕು ಮಕ್ಕಳು ಬೇಗ ಹಡದೇನಮ್ಮ॥ ೫ ॥ ದಶಮಿ ಏಕಾದಶಿ ದ್ವಾದಶಿ ಯೆಂಬೋದು ಅರಿಯೇವಮ್ಮ। ಹರಿ । ಹೆಸರಲಿ ಪಕ್ಷಕ್ಕೊಂದುಪವಾಸವರಿಗೆ ದೊರಕಿ ತಮ್ಮ॥ ವಸುಧೆಯೊಳಗೆ ಮಧ್ವಮತವೆಂಬೋದು ಸಿದ್ಧವಾಯಿತಮ್ಮ। ಪುಸಿಯಲ್ಲ ಪುರಾಣ ಪುಣ್ಯಕಥೆಗಳು ಹೆಚ್ಚಿತಮ್ಮ ॥ ೬ ॥ ಅನ್ನ ದೇವರಿಗೆ ನೈವೇದ್ಯನಿಟ್ಟುಂಬೋದು ಅರಿಯೇವಮ್ಮ । ಹೊನ್ನೊಂದು ಕಾಸಾಗಿ ತಾಗೀಗ ಕಾಸು ಹೊನ್ನಾಯಿತಮ್ಮ ॥ ನಿನ್ನಾಣೆಲೇ ಸಖಿ ಮೊಗತನ ಕೆಟ್ಟುಹೋಯಿತಮ್ಮ । ಚೆನ್ನ ಪುರಂದರವಿಠಲನ ಭಜಿಸಿದ ಧರ್ಮ ವಮ್ಮ॥ ೭ ॥ ಶ್ರೀ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

### ✓೬೬. ರಾಗ ಧನ್ಯಾಸಿ, ಅಟತಾಳ.

ಮಾಡಿದ ಯೆನ್ನ ಫಕೀರನು ಸದ್ಗುರು ಮಾಡಿದ ಯೆನ್ನ ಫಕೀರ ॥ ॥ ಪಲ್ಲ ॥ ಅನುಭವ ಕಪ್ಪರಿ ಹೃದಯದ ಜೋಳಿಗೆ ಯೆನ್ನಯ ಕೊಂಕಳ ಲಿಟ್ಟು । ಅನಿಮಿಷಧಟ್ಟಿ ಆರಗಿನ ರೊಟ್ಟಿ ಯೆನ್ನಯ ಕೈಯ್ಯಲ್ಲಿಟ್ಟ ॥ ೧ ॥ ನಾದದ ತಂಬುರಿ ಮೋದಮಂದಾರವು ನಿಜ್ಞಂಗದ ಟೊಪ್ಪಿನೆಸಿಟ್ಟ । ಬೋಧದ ಭಂಗಿ ಅಮೃತದ ಲುಂಗಿ ಸಮಾನ ಗುಳಿಗೆಯನಿಟ್ಟ ॥ ೨ ॥ ಈ ಪರಿ ಮಾಡಿ ಬಯಲನ ತೋರಿ ಕರವನು ನೆತ್ತಿಯ ಅಟ್ಟಿ । ಭೂಪ ಪುರಂದರವಿಠಲರಾಯನು ತಿರಿಗೆಂದಪ್ಪಣೆ ಕೊಟ್ಟ ॥ ೩ ॥ ಶ್ರೀ೬ ॥

### ೬೭. ರಾಗ ಧನ್ಯಾಸಿ, ಆದಿತಾಳ.

ಮೋಸಹೋದೆನಲ್ಲಾ ತಿಳಿಯದೆ ಮೋಸಹೋದೆನಲ್ಲಾ ॥ ಪಲ್ಲ । ಕ್ಲೇಶಪಾಶವನು ನಾಶನಮಾಡುವ । ಶ್ರೀಶನಂಘ್ರಿಗಳ ಲೇಸಾಗಿ ಸ್ಮರಿಸದೆ ॥ ಅನುಪಲ್ಲ ॥ ಕಾಯದಾಶೆಯಿಂದಾ ಕಂಡದ್ದು ಬೇಡಿ ಶ್ವಾನನಂತೆ । ಮಾಯಪಾಶದಲಿ ಶಿಲುಕಿ ನಾನು ಮಾರರಮಣನೆ ನಿನ್ನ ಧ್ಯಾನಮಾಡದೇ ॥ ೧ ॥ ಪುಷ್ಪ ಜಾಜಿಗಳನು ಮಲ್ಲಿಗೆ ಭಕ್ತಿಭಾವದಿಂದಾ (ತಂದು) । ಕೃಷ್ಣಾವತಾರನ ಪೂಜೆಯು ಮಾಡಿ ವಿಷ್ಣುಲೋಕವನು ಸೂರೆಗೊಳ್ಳದೆ ॥ ॥ ೨ ॥ ಸತಿಸುತಾದಿ ಬಂಧುಬಳಗ ಹಿತವ ನುಡಿವರ್ಯಾರೋ । ಗತಿ ನೀನೆ ತಂದೆತಾಯಿ ನೀನೆ ಸದ್ಗತಿ ನೀಯೋ ಪುರಂದರವಿಠಲ ॥ ೩ ॥

### ೬೮. ರಾಗ ಯದುಕುಲಕಾಂಬೋಧಿ, ಅಟತಾಳ.

ಯಮನ ಶಾಸನ ಕೇಳೊ ಜೀವಾ । ಇದು ಸಂಶಯವಿಲ್ಲೆಂದು ಎಣಿಸು ಸ್ವಭಾವಾ ॥ ಪಲ್ಲ ॥ ಪರಸತಿಯರ ನೋಡಿದವಗೆ । ಪತ್ತುಕೊರಡು ಕೆಂಪಗ ಕಾಸಿ ಕುಕ್ಕಿ ಕಣ್ಣೊಳಗೆ ॥ ಯೆರಡು ಗುಡ್ಡನು ಪೀಕೋರವಗೆ । ಕರಗಿಸಿ ಸೀಸವ ಪೊಯ್ಯೋರೊ ಅವನ ಕಿವಿಯೊಳಗೆ ॥ ೧ ॥ ಅನ್ಯಸ್ತ್ರೀ ಪುರುಷರ ಸಂಗ । ತನ್ನವರ ಕುಲ ಅಳಿಶಿಟ್ಟು ಹಾಕುವ ರಂಗ ॥ ನರಕಕ್ಕೆ ಗುರಿಮಾಡಿ ತುಂಗ । ಕೆಂಡವುರಿವ ಉಕ್ಕಿನ ಕಂಭ ಕಟ್ಟಿಪ್ಪ

ಭಂಗ ॥ ೨ ॥ ಪರಸತಿ ಮೆರೆವೋದು ಕಂಡು । ಗಾಣ ಪರಳೊಳಗಾಡಿಸಿ ಪಣಿಗಿಸಿ ಬೆಂಡು ॥ ಉರಿತೈಲದೊಳಘಾಕಿ ಗುಂಡು । ಕರದು ತೆರನಾಗಿ ಹಂದಿಯ ತಿನಿಸುವ ಖಂಡು ॥ ೩ ॥ ಅನ್ಯಸ್ತ್ರೀವಿಚಾರ ವೋಹಪಿಟ್ಟಿಹ ಘನ್ನಘಾತಕಗೆ ಗರಳಂತೆನೀಹ ॥ ಚನ್ನ (ಬೆನ್ನ) ಚರ್ಮವ ಕಿತ್ತಿ ದೇಹ । ಕುಟ್ಟಿ ಘೋರಿಸಿ ಬಾಧಿಸಿ ಕಡಲಿಕ್ಕೆ ಬಾಹ ॥ ೪ ॥ ಗಂಡನಿಂದಲಿ ಕೆಲಸಮಾಡಿ । ಕೊಂಡಹೆಂಡರಿಗೆ ಖಡುಹಿಡದವರ ಕಾಡಿ ॥ ಮಂಡೆ ಕೂದಲು ಇನ್ನು ಕಿತ್ತೀಡ್ಯಾಡಿ । ಖಂಡಖಂಡವ ಕಿತ್ತಿ ದಂಡಿಪ್ಪ ನೋಡಿ ॥ ॥ ೫ ॥ ಅತಿಕಾಂಕ್ಷ ಸ್ತ್ರೀಯರಲ್ಲಿಂದ । ಜನ್ಮದ ಸದ್ಗತಿ ಕೇಳದೋ ಅತಿ ಕ್ರೂರದಿಂದ ॥ ರಣಹದ್ದು ಗುಂಪು ಜತೆಯಿಂದ । ಪೀಡಿಪೀಡಿಸುವನು ಮುದದಿ ಮುಕುಂದ ॥ ೬ ॥ ಇನ್ನು ಪಾಪಗಳ ನೀ ಮಾಡಬೇಡ । ಅನ್ಯರ ಗೊಡವೆಗೆ ನೀ ಹೋಗಬೇಡ ॥ ಸಜ್ಜನರ ಸಂಗ ಬಿಡಬೇಡ । ಚನ್ನ ಪುರಂದರವಿಠಲನ್ನ ಭಜಿಸದಿರಬೇಡಾ ॥ ೭ ॥ ಶ್ರೀ ॥

## ೬೯. ರಾಗ ಭೂಪಾಳಿ, ಝಂಪೆತಾಳ.

ಯಾಕೆನ್ನ ಎಬ್ಬಿಸಿದೆ ಶ್ರೀಹರಿಯ ಸೇವೆ ಧ್ಯಾನದ ವಳಗಿದ್ದೆನೇ ॥ ॥ ಪಲ್ಲ ॥ ಉದಯಕಾಲಕೆ ಎದ್ದು ನದಿಯ ತೀರಕೆ ಹೋಗಿ ವೃತ್ತಿಗೆ ಶೌಚದಿಂದ ಮಲಮೂತ್ರ ಆತ್ಮಶುದ್ಧಿಗಳ ಮಾಡಿ ನದಿಯಲಿ ನಿಂತು ಸ್ತೋತ್ರಂಗಳನೆ ಮಾಡಿ ತೀರ್ಥಾಭಿಮಾನಿ ಪ್ರಾರ್ಥನಂಗಳನೆ ಮಾಡಿ ಸ್ನಾನ ಸಂಧ್ಯಾನ ಜಪತಪಂಗಳನೆ ಮಾಡಿ ಶ್ರೀಹರಿಯ ಧ್ಯಾನದಲಿ ನಾ ಮನೆಗೆ ಬರುತಲಿದ್ದೆ ॥ ೧ ॥ ಆಕಳ ಶೆಗಣದಲಿ ಭಾಗೀರಥಿ ಉದಕದಲಿ ದೇವರ ಜಗಲಿಯನು ಸಾರಿಸಿ ನಾನು ಕಾರಳಿಗಳನು ತೆಗದು ಶಂಖ ಚಕ್ರ ಸ್ವಸ್ತಿಕ ಪದ್ಮದಿಂದ ಬಗೆಬಗೆ ಬೃಂದಾವನ ರಂಗವಲಿನಿಟ್ಟು ಶ್ರೀ ಹರಿಯ ವಂದಿಸಿ ನಾನು ಕೈಯ್ಯ ಮುಗಿತಲಿದ್ದೆ ॥ ೨ ॥ ಸುವರ್ಣದ ಮಣಿ ಕುಂದನದ ಕೀಲು ಬೆಳ್ಳಿಪೀಠದ ಮಣಿಗಳು ಭಂಗಾರದ ರಾಜ ವರ್ಣದ ಮಣಿಗಳು ಈ ಪರಿ ಮಣಿಗಳು ತಾರತಾರಕೆ ಇಟ್ಟು ಶ್ರೀಹರಿಗೆ ವಂದಿಸಿ ನಾನು ಕೈಯ್ಯ ಮುಗಿತಲಿದ್ದೆ ॥ ೩ ॥ ಸುವರ್ಣವಾದ ಛತ್ರಿಯ

ಮಂಟಪ ಬೆಳ್ಳಿಚೂಡದ ಮಂಟಪ ಭಂಗಾರದ ರಾಜವರ್ಣದ ಮಂಟಪ ಕಂಬವ ನಿಲಿಸಿ ಸಂದುಸಂದು ಬೋದಿಗೆ ದುಂಡುಮುತ್ತಿನ ಕುಚ್ಚು ನಾನಿಡುತಿದ್ದೆ ॥ ೪ ॥ ಸೂರ್ಯಪೀಠದ ಮುಖ ಮೇಲೆ ಹಾಸಿಕೆಗಳು ರತ್ನದ ಹುವ್ವುಗಳೆ ಬುಟ್ಟೆದಾರಿ ಜಲತಾರಿ ಹುವ್ವುಗಳೆ ಎಡೆಗೆಡೆಗೆ ಬೋದಿಗ್ಗೆ ಬಿಗಿದು ಮುತ್ತಿನ ಸ್ತುತಿ ಜಗದೊಡಯನಾಭಗೆ ಅಣಿಮಾಡು ತಲಿದ್ದೆ ॥ ೫ ॥ ಹಲಸು ತೆಂಗಿನಮರ ಕಿತ್ತಳೆ ದಾಳಿಂಬ ಕಬ್ಬಿನ ಗೆಣಿಕೆ ಗಳೆ ಸೀತಾಫಲ ದ್ರಾಕ್ಷದ ಗೊಲೆಗಳ ಈ ಪರಿಯಿಂದ ಹರಿಯ ಮಂಟ ಪಕ್ಕೆ ಗೊಲೆಗಳ ಕಟ್ಟಿ ನಾ ಕೈಯ್ಯ ಮುಗಿತಲಿದ್ದೆ ॥ ೬ ॥ ಗಂಡಿಕೆ ಸಾಲಿ ಗ್ರಾಮ ವುಭಯ ಸುದರುಶನ ವೇಣುಗೋಪಾಲಮೂರುತಿ ಹಯಗ್ರೀವ ಯೆಂಬೊ ಶ್ರೀಧರಮೂರುತಿ ವಾಸುದೇವ ಯೆಂಬೊ ಶ್ರೀಧರಮೂರುತಿ ಲಕ್ಷ್ಮೀನಾರಾಯಣ ಲಕ್ಷ್ಮೀನರಸಿಂಹ ವಿಷ್ಣುಮೂರುತಿಗೆ ಎನ್ನ ಕೈಯ್ಯ ಮುಗಿತಲಿದ್ದೆ ॥ ೭ ॥ ಸುವರ್ಣವಾದ ಗೆದ್ದಿಗೆ ಮಂಟಪ ಕೆತ್ತಿಕೆ ಸೂರ್ಯಪಾನ ನವುಬತ್ತು ನಗಾರಿ ಭೇರಿವಾದ್ಯ ತಾಳ ಮದ್ದಳವಾದ್ಯ ನಾನಾಪರಿ ವಾದ್ಯ ದುಂದುಭಿ ನವುಬತ್ತು ನಾ ಮುಂದೆ ಹೊಯ್ತಿದ್ದೆ ॥ ೮ ॥ ಅಗರು ಚಂದನ ಗಂಧಗವರಕಚ್ಚೂರವೆ ಪರಿಪರಿ ಕೇಸರಿಯೆ ಬಗೆಬಗೆ ಬೆರಸಿದ ಜಾಪರವೆ ಕಸ್ತೂರಿ ಬೆರಸಿದ ಎಳೆಯ ಶ್ರೀಗಂಧವು ಶ್ರೀಹರಿಯು ಶಿರದಲ್ಲಿಟ್ಟು ಕೈಮುಗಿತಲಿದ್ದೆ ॥ ೯ ॥ ಮರುಗ ಮಲ್ಲಿಗೆ ಜಾಜಿತರುವು ಶಾಮಂತಿಗೆ ಮುಡಿವಾಳ ಪಚ್ಚೆದವನ ಕ್ಯಾದಿಗೆ ಕಮಲ ಮರುಗು ಮಲ್ಲಿ ಗೆಯೆ ಎಳೆಯ ಶ್ರೀತುಳಸಿ ವನಮಾಲೆಗಳನು ಧರಿಸಿ ಎರಡು ಕೈಗಳಲಿ ಪಿಡಿದು ಶ್ರೀಹರಿಗೆ ಅರ್ಪಿಸುತಿದ್ದ ॥ ೧೦ ॥ ಕಂಚು ಹಿತ್ತಾಳೆ ಸುವರ್ಣದ ಸಮಯ ಕುಂದಣದ ಕೀಲು ಸಾಲುದೀವಿಗೆಗಳೆ ಸಾಲುದೀವಿಗೆ ಕಟ್ಟಿ ದೀವಿಗೆಗಳು ಹಚ್ಚಿಟ್ಟು ತುಪ್ಪದ ದೀವಿಗೆಯೆ ಬಗೆಬಗೆ ತುಂಬಿಟ್ಟ ಹಲಿ ಗಾರತಿ ಸಾಲುದೀವಿಗೆಯನ್ನು ಲಕ್ಷದೀವಿಗೆಯನ್ನು ವಿಷ್ಣುಮೂರುತಿಗೆ ನಾ ಕೈಯ್ಯ ಮುಗಿತಲಿದ್ದೆ ॥ ೧೧ ॥ ಉತ್ತಮವಾಗೋದು ಮೊದಲಿ ತ್ತೋದು ಧೂಪಾರತಿ ಮೊಡನೇ ಏಕಾರತಿಯೇ ಪಂಚವರ್ಣದಾರತಿ ಕರ್ಪೂರದಾರತಿ ಶ್ರೀಹರಿಗೆ ಅರ್ಪಿಸಿ ನಾನು ಕೈಯ್ಯ ಮುಗಿಯುತಲಿದ್ದೆ ॥

॥ ೧೩ ॥ ಮಂಡಲಂಗಳು ಮಾಡಿ ರಂಗವಲಿಗಳ ಹಾಕಿ ಹಂಡಾಹಂಡ ವಲಿಯಿಳಿವಿ ಭೂಮಂಡಲಾಧಿಪತಿ ನಿನಗೆ ಅರ್ಪಿತವೆಂದು ತಂದು ನೈವೇದ್ಯಿಟ್ಟು ಶ್ರೀಹರಿಗೆ ಅರ್ಪಿಸುತಿದ್ದೆ ॥ ೧೩ ॥ ಅರವತ್ತು ದಿನಿಸಿನ ಪರಿಪರಿ ಶಾಕಗಳು ಕರದು ಸಾತಾಳಿಸಿದ ಬಗೆಬಗೆ ಲವಣಶಾಕಗಳು ಈ ಪರಿಯಿಂದಲಿ ಎಡಗಳನೆ ಮಾಡಿ ತಂದು ನೈವೇದ್ಯಿಟ್ಟು ಶ್ರೀಹರಿಗೆ ಅರ್ಪಿಸುತಿದ್ದೆ ॥ ೧೪ ॥ ಐದು ದಿನಿಸಿನ ಪರಮಾನ್ನವ ಮಾಡಿ ಸಣ್ಣಕ್ಕಿ ಶಾಲ್ಯಾನ್ನ ಚಿತ್ರಾನ್ನ ದಧ್ಯಾನ್ನ ಮೊಸರು ಅನ್ನ ಮೊಸರು ಅನ್ನವ ಮಾಡಿ ಮಧುರೆಯ ಕೃಷ್ಣಾ ನಿನಗೆ ಅರ್ಪಿತವೆಂದೆ ॥ ೧೫ ॥ ಕರಿ ಆಕಳ ಹಾಲು ಕೆನೆಮೊಸರುಗಳು ನೊರೆಹಾಲು ಘೃತಗಳನು ಸಕ್ಕರೆ ಬೆರಸಿದ ನೊರೆಹಾಲುಗಳನೆ ತಂದು ಉಡುಪಿಯ ಕೃಷ್ಣಾ ನಿನಗೆ ಅರ್ಪಿತವೆಂದೆ ॥ ॥ ೧೬ ॥ ಅಷ್ಟಭೋಗದ ಅಡಿಕೆ ಕರ್ಪೂರದ ವೀಳ್ಯ ಹೆಚ್ಚಿನ ಬಿಡಿಯೆ ಲೆಯೇ ಸುಣ್ಣಸಹಿತವಾದ ಲವಂಗವು ಯಾಲಕ್ಕಿ ಶ್ರೀಹರಿಗೆ ಅರ್ಪಿಸಿ ನಾನು ಕೈಯ್ಯ ಮುಗಿಯುತಲಿದ್ದೆ ॥ ೧೭ ॥ ಉತ್ತಮದ ರಾಮ ಅಯೋಧ್ಯದ ರಾಮ ಪಟ್ಟಾಭಿರಾಮನೆ ಸೀತಾಪತಿ ಜಾನಕಿಮನೋಹರ ಹಾಸಿಕೆಯನು ಹಾಕಿ ಅಣೆಮಾಡುತಲಿದ್ದೆ ॥ ೧೮ ॥ ಬೆಣ್ಣೆಕಳ್ಳನು ಕೃಷ್ಣ ಚಿನ್ನ ಮಾಯದ ಕೃಷ್ಣ ವದನ ತೋರಿದ ಕೃಷ್ಣನೇ ಮೃತ್ತಿಕೆ ತಿಂದ ಕಾಳಿ ಮರ್ದನ ಕೃಷ್ಣನೇ ರುಗ್ಮಿಣಿವಲ್ಲಭ ಜಾನಕಿಮನೋಹರ ಇಂದು ಶ್ರೀ ಕೃಷ್ಣಗೆ ಕೈಯ್ಯ ಮುಗಿಯುತಲಿದ್ದೆ ॥ ೧೯ ॥ ಪ್ರಳಯಕಾಲದಲ್ಲಿ ಆಲದೆಲೆಯ ಮೇಲೆ ಚತುರ್ಮುಖ ಪರಬ್ರಹ್ಮನೇ ಮಲಗಿಹ ವಿರಾಟರೂಪನಾಗಿ ಈರೇಳು ಭುವನವು ಉದರದಲ್ಲಿ ಇಟ್ಟ ಪುರಂದರವಿಠಲನ್ನ ಧ್ಯಾನದೊಳಗೆ ಇದ್ದೆ ॥ ೨೦ ॥ ಶ್ರೀಃ ॥

## ೭೦. ರಾಗ ಪೂರ್ವಿ, ರೂಪಕತಾಳ.

ಯಾತಕ್ಕೆ ದುರಾಶೆ ಎಲ ಮನವೇ ॥ ಪಲ್ಲ ॥ ಯೆಲ ಮನವೇ ನೀತಿಯ ಮನವೇ ನಿನಗ್ಯಾತಕ್ಕೆ ದುರಾಶೆ ॥ ಅನುಪಲ್ಲ ॥ ಜನ್ಮಜನ್ಮಾಂತರದ ಪೂಜೆ ಫಲವೂ । ಅನುಭವಿಸಲ್ಲದೆ ಬಿಡದೆಲೋ ಮನವೇ ॥ ೧ ।

ಫಣೆಯಲ್ಲಿ ಬರೆದ ಬ್ರಹ್ಮನ ಲಿಪಿಯು । ಮೀರುವದುಂಟೇ ಜಗದೊಳು ಮನವೇ ॥ ೨ ॥ ಪುರಂದರವಿಠಲನ ಚರಣಕಮಲಗಳು । ಅನುದಿನ ಭಜಿಸಿ ಬದುಕೆಲೋ ಮನವೇ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೬೧. ರಾಗ ಕಾಂಬೋಧಿ, ಆದಿತಾಳ.

ಯಾರೂ ಅರಿಯಾರೊ ನಮ್ಮೂರು । ಹರಿದಾಸರಿಗೊಲಿದರೆ ನಮ್ಮೂರು ॥ ಪಲ್ಲ ॥ ಅಂಡವ ತುದಿಯಲಿ ನಮ್ಮೂರು । ಅದು । ಕಂಡವರಿಲ್ಲವೊ ನಮ್ಮೂರು ॥ ದಂಡೆ ಕಾಣದು ನಮ್ಮೂರು । ನಡು । ಮಂಡೆಸ್ಥಳವೆ ನಮ್ಮೂರು ॥ ೧ ॥ ಬೈಲಿಗೆ ಬೈಲೆ ನಮ್ಮೂರು । ಅದು । ಬೈಲೆ ಬ್ರಹ್ಮನೆ ನಮ್ಮೂರು ॥ ಭವಭಯಹರನಾಳ್ವದೆ ನಮ್ಮೂರು । ಅದು । ಭವಭಯಹರವೆ ನಮ್ಮೂರು ॥ ೨ ॥ ಪರಸ್ಪರವೇ ನಮ್ಮೂರು । ಅದೇ । ಪರದೇಶಿಗಳಿರುವೋದೆ ನಮ್ಮೂರು ॥ ಪೂರ್ಣಾನಂದವೇ ನಮ್ಮೂರು । ಅಲ್ಲಿ । ಪುರಂದರವಿಠಲನೆ ನಮ್ಮೂರು ॥ ೩ ॥ ಶ್ರೀಃ ॥

## ದ್ರೌಪದಿಯ ಮಾನಸಂರಕ್ಷಣೆ.

## ೬೨. ರಾಗ ಸೌರಾಷ್ಟ್ರ, ಆದಿತಾಳ.

ರಂಗನೊಲಿದಾ ನಮ್ಮ ಕೃಷ್ಣನೊಲಿದಾ ॥ ಪಲ್ಲ ॥ ಅಂಗನೆ ದ್ರೌಪದಿಗೆ ವಸ್ತ್ರ ಅಕ್ಷಯವೆಂದನು ॥ ಅನುಪಲ್ಲ ॥ ಕರಿಯುಪುರದ ನಗರದಲ್ಲಿ ಕೌರವರು ಪಾಂಡವರು । ಧರೆಯ ಪಟ್ಟಿ ಜೂಜನಿಟ್ಟು ಲೆತ್ತವಾಡಲು ॥ ಪರಮ ಪಾಪಿ ಶಕುನಿ ತಾನು ಪಾಶದೋಳ್ಪೊಕ್ಕಿರಲು । ಧರ್ಮರಾಯ ಧಾರುಣಿ ದ್ರೌಪದಿಯ ಸೋತನು ॥ ೧ ॥ ಸೋತನೆಂದು ದುರ್ಯೋಧನ ಸಂತೋಷದಿಂದಲ್ಲಿ ತನ್ನ । ದೂತರಟ್ಟಿ ಪಾಂಡವರ ಬದುಕು ತರಿಸಿದಾ ॥ ಜಾತಿಮುತ್ತು ಚಿನ್ನಬೆಳ್ಳಿ ಆನೆಕುದುರೆಗಳ ಸಹಿತ । ಭೀತಿಯಿಲ್ಲದಲೆ ಭಂಡಾರಕಿಟ್ಟನು ॥ ೨ ॥ ಮುದ್ದುಮುಖದ ದ್ರೌಪದಿಯ ಮುಂದೆ ಮಾಡಿ ತನ್ನಿರೆಂದು । ತಿದ್ದಿ ತನ್ನ ಮಾನ್ಯರಿಗೆ ತಿಳಿಯ ಹೇಳಿದಾ ॥ ಮುದ್ರೆ

ಮನ್ನವರು ಬಂದು ದ್ರೌಪದಿಯ ಮುಂದೆ ನಿಂತು । ಬುದ್ಧಿಯಿಂದಲ್ಯಲ್ಲ ಬಿನ್ನಹವಮಾಡಲು ॥ ೩ ॥ ಅಮ್ಮ ಕೇಳೆ ಅರಸುಗಳು ಅಚ್ಚ ಪಗಡಿ ಪಂಥ ನಾಡಿ । ಹಮ್ಮಲಿಂದ ಜೂಜನಿಟ್ಟು ಲೆತ್ತವಾಡಲು ॥ ಧರ್ಮರಾಯ ಸೋತನೆಂದು ಸತ್ಯವಚನ ಕೌರವಂಗೆ । ನಿಮ್ಮ ಇಂಬು ನಿಲವು ಕರಿಯ ಕೊಟ್ಟರೆಂದರು ॥ ೪ ॥ ಪಟ್ಟಪದವಿ ಅವರಿಗಾಗಿ ಬಡವರಾಗಿ ಇಪ್ಪ ನೆಂದರೆ । ಕೆಟ್ಟ ಪಗಡಿ ಪಂಥ ಜೂಜಿನ್ನಲ್ಲಿ ವದಗಿತು ॥ ದುಷ್ಟ ಕೌರ ವನು ಯೆನ್ನ ಲಜ್ಜೆ ನಾಚಿಕೆಯ ಕಂಡು । ಭ್ರಷ್ಟಮಾಡುವನು ಯೆಂದು ಬಳಲಿ ದ್ರೌಪದಿ ॥ ೫ ॥ ಬಾಗಿ ಬಳುಕಿ ಬಿಕ್ಕಿ ತನ್ನ ಕಣ್ಣನೀರು ಸುರಿವು ತಲಿ । ಮಾಗಿಕೋಗಿಲಂತೆ ತನ್ನ ಕಾಯ ನೊಲವುತ ॥ ಆಗ ಕೃಷ್ಣ ನಂಘ್ರಿಗಳ ಅಂತರಂಗದಲ್ಲಿ ನೆನದು । ಸಾಗಿ ಸಾಗಿ ಹೆಜ್ಜೆನಿಡುತ ಸಭೆಗೆ ಬಂದಳು ॥ ೬ ॥ ವೀರಕರ್ಣ ಅಶ್ವತ್ಥಾಮ ವಿದುರ ಶಲ್ಯ ಭಗವತ್ತನು । ಕ್ರೂರ ಕೌರವ ದುಶ್ಶಾಸನ ಗುರುಹಿರಿಯರು ॥ ಸಾರುತಿಪ್ಪ ಭಟರು ಪರಿವಾರ ರಾಹುತರ ನೋಡಿ । ಧಾರುಣಿಗೆ ಮುಖವ ಮಾಡಿ ನಾಚಿ ನಿಂತಳು ॥ ೭ ॥ ಚಂದದಿಂದ ದುರಿಯೋಧನ ಚದುರೆ ದ್ರೌಪದಿಯ ಕೂಡ । ಮುಂದುನರಿಯದ ಮುಗುಳುನಗೆಯ ಮಾತನಾಡಿದಾ ॥ ಹಿಂದೆ ಸ್ವಯಂವರದಲ್ಲಿ ಐವರಿಗೆ ಆದ ಬಾಲೆ । ಯೆಂದು ಯೆನ್ನ ಪಟ್ಟ ವರಸಿಗೊಪ್ಪಿತೆಂದನು ॥ ೮ ॥ ಮಲ್ಲಿಗೆಯ ಮುಡಿಯ ನಾರಿ ಮುದ್ದು ಮುಖದ ಪೈಯಾರಿ । ಚಲ್ಲೆಗಂಗಾಳೆ ದ್ರೌಪದಿ ಬಾರೆ ಯೆಂದನು ॥ ಬಿಲ್ಲು ಯೆತ್ತಲಾರದವನೆ ಭಂಡಾರವ ಕಾದಿಪ್ಪವನೆ । ಹಲ್ಲು ಕಿತ್ತುವರ್ಯೆ ವರು ಜೇಡವೆಂದಳು ॥ ೯ ॥ ಅಚ್ಚ ಪೊಂಬಣ್ಣದ ಬೊಂಬೆ ಆನೆಯಂತೆ ನಡಪ್ಪೋ ರಂಭೆ । ನಿಚ್ಚಮುತ್ತಿನಂತೆ ಬಿಂಬಾಧರೆಯೆಂದನು ॥ ಹೆಚ್ಚು ಮಾತನಾಡದಿರೋ ಹೆರರ ಹೆಣ್ಣ ನೋಡದಿರೋ । ನುಚ್ಚುಮಾಡುವ ರ್ರವರು ಜೇಡವೆಂದಳು ॥ ೧೦ ॥ ಮುಟ್ಟಬಡಕರ್ಯೆವರಿಗೆ ಮಡದಿಯಾಗು ವದು ಸಲ್ಲ । ಪಟ್ಟಮಂಚಕೊಪ್ಪಿವೆಂತೆ ಬಾರೆ ಯೆಂದನು ॥ ಕೆಟ್ಟಮಾತ ನಾಡದಿರೋ ಕ್ರೋಧದಿಂದ ನೋಡದಿರೋ । ರಟ್ಟೆ ಕಿತ್ತುವರ್ಯೆವರು ಜೇಡವೆಂದಳು ॥ ೧೧ ॥ ಅಡವಿತಿರುಕರ್ಯೆವರಿಗೆ ಮಡದಿಯಾಗುವದು

ಸಲ್ಲ । ತೊಡೆಯ ಮೇಲೆ ವಪ್ಪಿವಂತೆ ಬಾರೆ ಯೆಂದನು ॥ ಬೆಡಗು ಮಾತನಾಡದಿರೋ ಭೀಮಸೇನನ ಗದೆಯು ನಿನ್ನ । ತೊಡೆಯ ಮೇಲೆ ವಪ್ಪುವದು ಬೇಡವೆಂದಳು ॥ ೧೨ ॥ ಇಷ್ಟು ಬಿಂಕ ಬಡಿವರವು ಹೆಣ್ಣು ಬಾಲೆಗಿವಳಿಗೆಷ್ಟು । ಸಿಟ್ಟಿನಿಂದ ದುರಿಯೋಧನ ಸಾರಿ ಕೋಪಿಸಿ ॥ ಉಟ್ಟ ಸೀರೆ ಉಡಿಯಲವಳ ಉಯಿಕೊ ತೀರಲೆಂದು । ದೃಷ್ಟಿಯಿಂದ ದುಶ್ಯಾಸನಗೆ ಸನ್ನೆಮಾಡಿದ ॥ ೧೩ ॥ ಮಚ್ಛ ಕೂರ್ಮ ವರಹ ಕಾಯೊ ಮುದ್ದು ನಾರಸಿಂಹ ಕಾಯೊ । ಹೆಚ್ಚಿನ ವಾಮನನೆ ಕಾಯೊ ಭಾರ್ಗವ ಕಾಯೊ ॥ ಅಚ್ಚ ರಾಮ ಕೃಷ್ಣ ಕಾಯೊ ಬುದ್ಧ ಕಲ್ಕಿರೂಪ ಕಾಯೊ । ಸಚ್ಚಿದಾನಂದನೆ ಕಾಯೊ ಸ್ವಾಮಿ ಯೆಂದಳು ॥ ೧೪ ॥ ಸಜ್ಜನರ ಪ್ರಿಯ ಕಾಯೊ ಸಾಧುಗಳ ರಕ್ಷಕನೆ ಕಾಯೊ । ನಿರ್ಜರವಂದಿತನೆ ಕಾಯೊ ನರಹರಿ ಕಾಯೊ ॥ ಅರ್ಜುನನ ಸಖನೆ ಕಾಯೊ ಅನಂತಮೂರುತಿ ಕಾಯೊ । ಲಜ್ಜೆ ನಾಚಿಕೆಯ ಕಾಯೊ ಸ್ವಾಮಿ ಯೆಂದಳು ॥ ೧೫ ॥ ದುರುಳ ದುಶ್ಯಾಸನನು ಬಂದು ದ್ರೌಪದಿಯ ಮುಂದೆ ನಿಂದು । ಕರವ ಪಿಡಿದು ಶಿರಗ ಹಿಡಿದು ನೆರಿಯ ಶೆಳೆಯಲು ॥ ಮರುಳು ಆಗದಿರೊ ನಿನ್ನ ರಕ್ತದೊಳು ಮುಡಿಯ ಅದ್ದಿ । ಕರುಳು ದಂಡಿಯನೆ ಮಾಡಿ ಮುಡಿವೆನೆಂದಳು ॥ ೧೬ ॥ ಕಲಹಕಂಠೆ ಹೆಣ್ಣೆ ನಿನ್ನ ಘಾಸಿಮಾಡುವೆನೆಂದು । ಗಲ್ಲದಲ್ಲಿ ಕೈಯನಿಕ್ಕಿ ನೆರಿಯ ಶೆಳೆಯಲು ॥ ನಿಲ್ಲೊ ನಿಲ್ಲೊ ಪಾಪಿ ನಿನ್ನ ನಾಲಿಗೆಯ ಕಿತ್ತಿ ಯೆರಡು । ಪಲ್ಲಿನಲ್ಲಿ ಕೇಶನ್ನಿಕ್ಕಿಕೊಂಬೆ ನೆಂದಳು ॥ ೧೭ ॥ ಬೆನ್ನಿನಲ್ಲಿ ಪೆಟ್ಟನಿಕ್ಕಿ ಭಂಡುಮಾಡುವೆನೆಂದು । ಕೆನ್ನೆಯಲ್ಲಿ ಕೈಯನಿಕ್ಕಿ ನೆರಿಯ ಶೆಳೆಯಲು ॥ ರನ್ನೆವೀರ ಬೊಬ್ಬೆನಿಕ್ಕಿ ರಭಸದಿಂದ ಸಾರುತಲಿ । ಪನ್ನಗಶಯನ ಕೃಷ್ಣ ಕಾಯೊ ಯೆಂದಳು ॥ ೧೮ ॥ ಸಾರಿದವರ ಹೊರವ ಕರುಣಿ ಸಾಗರಶಯನ ಕೃಷ್ಣ । ನಾರಿ ದ್ರೌಪದಿಗೆ ವಸ್ತ್ರ ಅಕ್ಷಯವೆಂದನು ॥ ಸುರುತಿ ಕಂಭವತಿ ಸಣ್ಣಬಣ್ಣ ಸೀರೆಗಳು । ಮೇರುವಿನ ಬೆಟ್ಟದಂತೆ ಮಹಿಮೆ ತೋರಿದ ॥ ೧೯ ॥ ಹೊಂದಿದವರ ಹೊರವ ಕರುಣಿ ಸಿಂಧುಶಯನ ಶ್ರೀಕೃಷ್ಣ ನಲ । ವಿಂದ ದ್ರೌಪದಿಗೆ ವಸ್ತ್ರ ಅಕ್ಷಯವೆಂದನು ॥ ಒಂದು ಯೆರಡು ಮೂರು ನಾಲ್ಕು

ಕೋಟಿಸಂಖ್ಯೆ ಸೀರೆ ಸುಲಿದು । ನೊಂದು ಬೆಂದು ದುಶ್ಶಾಸನನು ನಾಚಿ ಕುಳಿತನು ॥ ೨೦ ॥ ನೋಡಿದರು ದ್ರೌಪದಿಯ ಮಾನರಕ್ಷಲೀಲೆಗಳ । ಮಾಡಿದರು ಮಾಧವನ ಮುದ್ದು ಸ್ತೋತ್ರವ ॥ ಮೂಢ ಕೌರವನ ಕೂಡ ಮಾನಿನಿ ದ್ರೌಪದಿಯು ಲೆತ್ತ । ವಾಡಿ ತನ್ನ ಪತಿಗಳೈವರ ಗೆದ್ದಳು ॥ ೨೧ ॥ ಕೇಸುಮುಡಿಯ ಕಟ್ಟಿದಳು ಕೈಯ ಕಾಲ ಮಣ್ಣಿನೊ ರಸಿ । ಸಾಸಿರನಾಮದ ಒಡೆಯ ಸುರರ ಪಾಲಕ ॥ ವಾಸಿವುಳ್ಳ ಕೃಷ್ಣ ಯೆನ್ನ ವಹಿಸಿ ಕಾಯಿದಿ ಯೆಂದು ಸಂ । ತೋಷದಿಂದ ದ್ರೌಪದಿಯು ಮನೆಗೆ ಬಂದಳು ॥ ೨೨ ॥ ಭಕ್ತಿಯಿಂದ ದ್ರೌಪದಿಯ ಮಾನರಕ್ಷಲೀಲೆ ಗಳ । ಯುಕ್ತಿಯಿಂದ ಹಾಡಿ ಪಾಡಿ ಕೇಳುವವರಿಗೆ ॥ ಸಕಲ ದೋಷ ಪರಿಹಾರ ಸಂತಾನ ಫಲಗಳುಂಟು । ಮುಕುತಿ ಕೊಡುವನು ನಮ್ಮ ಪುರಂದರವಿಠಲ್ಲ ॥ ೨೩ ॥ ಶ್ರೀಃ ॥

## ೭೩. ರಾಗ ಮೋಹನ, ಏಕತಾಳ.

ರಂಗ ಬಾರೋ ಕೃಷ್ಣ ಬಾರೋ ॥ ಪಲ್ಲ ॥ ಮಂಗಳಾತ್ಮಕ ಮನಸಿಜ ನಯ್ಯನೆ । ಅಂಗಜಜನಕ ಕಾಳಿಂಗಮರ್ದನ ಬಾರೋ ॥ ಅನುಪಲ್ಲ ॥ ಪುಂಡರೀಕಾಕ್ಷ ಶ್ರೀರಾಮಚಂದ್ರ ಬಾರೋ । ಕೋ । ದಂಡವನೆ ಪಿಡಿದ ಮುಕುಂದ ಬಾರೋ ॥ ಪಾಂಡುಸುತರ ಕಾಯಿದ ಪರಬ್ರಹ್ಮ ಬಾರೋ । ಉ । ದ್ದಂಡರೂಪ ತಾಳಿದ ನಾರಸಿಂಹನೆ ಬಾರೋ ॥ ೧ ॥ ಮಾವ ಕಂಸನ ಕೊಂದ ಮಹಿಮನೆ ಬಾರೋ । ಮಚ್ಛ ಕೂರ್ಮ ವರಹ ವಾಸುದೇವ ಬಾರೋ ॥ ನಿಶ್ಚಿಂತ ವಾಮನ ತ್ರಿವಿಕ್ರಮ ಬಾರೋ ಸ್ವಚ್ಛಮೂರ್ತಿ ದಿವ್ಯರೂಪದ ವಸ್ತು ಬಾರೋ ॥ ೨ ॥ ಕೊಡಲಿಯನು ಪಿಡಿದ ಕಡುಶೌರ್ಯ ಬಾರೋ । ತೇಜಿಯನೇರಿದ ಯೆನ್ನೊಡೆಯ ಬಾರೋ ॥ ಜಗದೊಡೆಯ ಪುರಂದರವಿಠಲರಾಯ । ವೆಂಕಟರಮಣನೆ ನೀನೀಗ ಬಾರೋ ॥ ೩ ॥ ಶ್ರೀಃ ॥

## ೭೪. ರಾಗ ಕಾಂಬೋಧಿ, ಅಟತಾಳ.

ರಾಮನಾಮ ರತ್ನಹಾರ ದೊರಕಿತು ಯೆನಗೆ ॥ ಪಲ್ಲ ॥ ಪೂರ್ವಪುಣ್ಯದ ಫಲಕೆ ॥ ಅನುಪಲ್ಲ ॥ ಮಚ್ಛನೆಂಬೋ ಮಾಣಿಕ್ಯದ ಹರಳು । ಕೂರ್ಮ

ನೆಂಬೋ ಕುಸರಿಗಳು । ವರಹನೆಂಬೊ ಹೊಸ ಮೋಹನದ ಚಿನ್ಹ । ನರಹರಿಯೆಂಬೋ ನಾಮದ ಸರಮುತ್ತು ॥ ೧ ॥ ವಾಮನನೆಂಬೋ ಪಲಿವ ಏಕಾವಳಿಯು । ಪರಶುರಾಮನೆಂಬೋ ಪಚ್ಚೆಯ ಹರಳು । ಕೃಷ್ಣನೆಂಬೋ ಕೀಲುಗಳು ಅತಿಕುಶಲದಿಂದಲಿತ್ತು ॥ ೨ ॥ ಬೌದ್ಧ ನೆಂಬೋ ಅತಳಗಳ ಬಿಗಿದಿತ್ತು । ಬಹುಬಗಿದಿಂತಿತ್ತು ಕಲಿಯೆಂಬೊ ಆಕುಣಿತಯ ಹಚ್ಚಿಟ್ಟು । ಪುರಂದರವಿಠಲನ ನಾಮದ ಸರಮುತ್ತು ಸೌಭಾಗ್ಯ ನಿಗಳಿಲ್ಲಿತ್ತು ॥ ೩ ॥ ಶ್ರೀ ॥

## ೭೫. ರಾಗ ನಾದನಾಮಕ್ರಿಯೆ, ಏಕತಾಳ.

ವಹವ್ವಾರೇ ಮೆಣಸಿನಕಾಯಿ । ವಣರೊಟ್ಟಿಗೆ ತಂದೆನೊ ತಾಯಿ ॥ ॥ ಪಲ್ಲ ॥ ಹುಟ್ಟುತಲಿ ಹಸುರಾಗುತ ಕಂಡೆ । ನಟ್ಟನಡಿವೆ ಕೆಂಪಾಗುತ ಕಂಡೆ । ಕಟ್ಟಿರಾಯನ ಬಹು ರುಚಿಯೆಂಬೆ ॥ ೧ ॥ ಒಂದೆರಡರವರೆ ಬಹು ರುಚಿಯೆಂಬೆ । ಮೇಲೆರಡರವರೆ ಬಹು ಖಾರೆಂಬೆ । ಅದು ಎರ ಡರವರೆ ಅತಿ ಖಾರೆಂಬೆ ॥ ೨ ॥ ಬಡವರಿಗೆಲ್ಲ ನಿನ್ನಾಧಾರಾ । ಅಡಿಗೆ ಊಟಕ್ಕೆ ನಿನ್ನ ಸಾರಾ । ಬಾಯಲಿ ಕಡದರೆ ಜಿಂಕಿಯ ಖಾರ ಪುರಂದರವಿಠಲನ ನೆನೆಯೋದು ಭಾರಾ ॥ ೩ ॥ ಶ್ರೀ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೭೬. ರಾಗ ಶಂಕರಾಭರಣ, ಅಟತಾಳ.

ವೆಂಕಟರಮಣನೆ ಬಾರೋ । ಶೇಷಾಚಲವಾಸನೆ ಬಾರೋ ॥ ಪಲ್ಲ ॥ ಪಂಕಜನಾಭ ಪರಮಪವಿತ್ರಾ । ಶಂಕರಮಿತ್ರನೆ ಬಾರೋ ॥ ಅನುಪಲ್ಲ ॥ ಮುದ್ದುಮುಖದ ಮಗುವೆ ನಿನಗೆ ಮುದ್ದುಕೊಡುವೆನು ಬಾರೋ । ನಿರ್ದಯವ್ಯಾಕೊ ನಿನ್ನೊಳಗೆ ನಾನು ಪೊಂದಿದ್ದೇನು ಬಾರೋ ॥ ೧ ॥ ಮಂದರಗಿರಿಯನೆತ್ತಿ ದಾನಂದಮೂರ್ತಿಯೆ ಬಾರೋ । ನಂದನ ಕಂದ ಗೋವಿಂದ ಮುಕುಂದ ಇಂದಿರೆ ಅರಸನೆ ಬಾರೋ ॥ ೨ ॥ ಕಾಮ ನಯ್ಯಾ ಕರುಣಾಳೊ ಶ್ಯಾಮಳವರ್ಣನೆ ಬಾರೋ । ಕೋಮಲಾಂಗ ಶ್ರೀಪುರಂದರವಿಠಲನೆ ಸ್ವಾಮಿರಾಯನೇ ಬಾರೋ ॥ ೩ ॥ ಶ್ರೀ

## ೭೭. ರಾಗ ಆನಂದಭೈರವಿ, ಅಟತಾಳ.

ವೆಂಕಟೇಶ ದಯಮಾಡೋ ವೇದವೇದ್ಯನೇ ॥ ಪಲ್ಲ ॥ ಪಂಕಜಾಕ್ಷ ಅಭಯವಿತ್ತು ಬೇಗೆನ್ನ ರಕ್ಷಿಸಯ್ಯ ॥ ಅನುಪಲ್ಲ ॥ ಚಿತ್ತಚಂಚಲವ ಬಿಡಿಸೋ ಮತ್ತ ಕ್ರೋಧವ ಓಡಿಸೋ । ಭ್ರಾಂತಿ ವಿಷಯಂಗಳು ಬೇಡ ಕಂತುಪಿತ ನಾರಾಯಣ ॥ ೧ ॥ ಸೃಷ್ಟಿ ಮೂವರೊಳಗೆ ನೀನೆ ಕಷ್ಟಬಡಿ ಸುವರೇನೊ । ನಷ್ಟ ತನ್ನ ನೋಡಬೇಡೋ ದೃಷ್ಟಿಸಿ ನೋಡೋ ದಯಾಳೋ ॥ ೨ ॥ ಭಾಳ ಅಪರಾಧಿ ನಾನು ನಿನ್ನ ಬಳಿಗೆ ಬಂದೆ ನಾನು । ವಲಿದು ಯೆನ್ನ ರಕ್ಷಿಸಯ್ಯ ವೇಲಗಿರಿ ಪುರಂದರವಿಠಲಾ ॥ ೩ ॥

## ೭೮. ರಾಗ ನಾಟಿ, ಝಂಪೆತಾಳ.

ಶರಣು ಶರಣು ॥ ಪಲ್ಲ ॥ ಶರಣು ಸಕಲೋದ್ಧಾರ ಅಸುರಕುಲಸಂಹಾರ । ಅರಸು ದಶರಥಬಾಲ ಜಾನಕೀಲೋಲಾ ॥ ಅನುಪಲ್ಲ ॥ ಈ ಮುದ್ದು ಈ ಮುಖವು ಈ ತನುವಿನ ಕಾಂತಿ । ಈ ಬಿಲ್ಲು ಈ ಬಾಣ ಈ ಸೀತಿಭಾವ ॥ ಈ ತಮ್ಮ ಈ ಸೀತೆ ಈ ಬಂಟರ ಬಾಣ । ಆವ ದೇವರಿಗುಂಟು ಭೂಲೋಕದೊಳಗೆ ॥ ೧ ॥ ಉಟ್ಟ ಪೀತಾಂಬರವು ಉಡಿಘಂಟೆ ಮಾಣಿಕ್ಯವು । ತೊಟ್ಟ ನವರತ್ನರಸ ಕರುಣವಿರಲು ॥ ಕೊಟ್ಟ ನಂಬಿಕೆ ತಪ್ಪ ತನ್ನ ಭಕುತರಿಗೆಲ್ಲ । ಸೃಷ್ಟಿಯೊಳೆಣೆಗಾಣೆ ಕೌಸಲ್ಯರಾಮಾ ॥ ೨ ॥ ಭಾವಿಸಲು ಅಯೋಧ್ಯಾಪಟ್ಟಣದಲಿ ವಾಸ । ಬೇಡಿವಿಷ್ಟಾರ್ಥಗಳು ಕೊಡುವೆನೆನುತಿರಲು ॥ ಭಾವಶುದ್ಧಿಗಳಿಲ್ಲ ತನ್ನ ಭಕುತರ ಪೊರೆವ . ಪುರಂದರವಿಠಲನೆ ರಘುರಾಮ ನಿಸ್ಸೀಮ ರಾಮಾ ॥ ೩ ॥ ಶ್ರೀ ॥

## ೭೯. ರಾಗ ಸೌರಾಷ್ಟ್ರ, ಏಕತಾಳ.

ಶ್ರೀಮಧ್ವರಮಣಾ ನಿನ್ನ ದ್ವೈತಮಹಿಮೆ ಯೆಂಥಾದ್ದೋ । ಸಮಸ್ತ ಕೋಟಿ ವೇದಂಗಳು ಕೂಡಿ ತುತಿಸಲೊಮ್ಮೆ ಸಮರ್ಥರಂಗಳಾಗಲಿಲ್ಲವೋ ॥ ಪಲ್ಲ ॥ ಯಂಕಾಮಯೇ ತಂತಮುಗ್ರಂ ಕೃಣೋಮಿ ಯೆಂಬಂಥಾ । ಶ್ರುತಿನಿಕರ ಪ್ರತಿಪಾದ್ಯಳಾದಳೋ ಸುಖಾಬ್ಧಿಯಲ್ಲಿ ನಿರುತ

ಮುಳುಗಿಪ್ಪಳೋ ರಮೆ ॥ ೧ ॥ ನಖದಲ್ಲಿ ನಾನಾ ವಿಧಾನೇಕವಿಷಯಂಗ ಳನ್ನು । ಏಕಮನದಿಂದ ನೋಡುತ ಲಯಾಬ್ಧಿಯಲ್ಲಿ ನಗುತ ಕುಳಿತಿ ಪ್ಪಳೋ ರಮೆ ॥ ೨ ॥ ಒಂದೇ ಕಾಲದಲ್ಲಿ ನಿನ್ನ ಒಂದೇ ರೋಮಕೂಪ ದಲ್ಲಿ ಅನಂತಕೋಟಿ ಬ್ರಹ್ಮಾಂಡಗಳು । ಮಾಧವನೊಬ್ಬ ಆನಂದ ದಿಂದಲಿ ಧರಿಸಿಪ್ಪ ॥ ೩ ॥ ಅವನಾಗ ಅವತಾರ ಅನಂತಾನಂತ ರೂಪಂ ಗಳು ದೇವಕಿತನಯಗುಂಟಯ್ಯಾ । ಕ್ಷೀರಾಬ್ಧಿಯಲ್ಲಿ ದೇವೇಶ ಸ್ತ್ರೀರೂಪ ಧರಿಸಿಪ್ಪ ॥ ೪ ॥ ಅಯಿವತ್ತುಕೋಟಿ ಯೋಜನ ವಿಸ್ತೀರ್ಣ ವಟಪತ್ರ ದಲ್ಲಿ । ಏಳುಕೋಟಿ ಯೋಜನಮಾನದಿ ಬಾಲಕನೊಬ್ಬ ಬಾಯಿಲುಂಗು ಟನಿಕ್ಕಿ ಮಲಗಿರುವ ॥ ೫ ॥ ಅಣೋರಣಿಯಾನ್ಮಹತೋ ಮಹಿಯಾ ನೆಂಬೋ ನಾನಾ ಶ್ರುತಿಯಿಂದ । ಸನ್ನುತ ಸದ್ಗುಣಸಂಪೂರ್ಣನು ವನ ಜಾಕ್ಷ ನಿನ್ನ ಶಿರಿ ನಿನ್ನ ಮಹಿಮೆ ಅರಿಯಳೋ ॥ ೬ ॥ ಅನಾಥರಕ್ಷಕ ನೆಂದು ನಿನ್ನ ನಂಬಿದಂಥ ರಮೆನ್ನ । ಮನ್ನಿಸಿ ರಕ್ಷಿಸೊ ಶ್ರೀಶ ಲಕ್ಷ್ಮೀಶ ಅನಾಥಬಂಧೊ ದೀನಬಂಧೋ ದಯಾನಿಧಿಯೇ ॥ ೭ ॥ ದಶಶತಸಾಸಿ ರದ ರೂಪನಾದ ವಾಸುದೇವ ಕುಸುಮನಾಭ । ಶೇಷಾದ್ರೀಶನೆ ಪುರಂ ದರವಿಠಲ ನಿನ್ನ ದಾಸನೆಂದು ದಯಮಾಡಯ್ಯಾ ॥ ೮ ॥ ಶ್ರೀಃ ।

## ೮೦. ರಾಗ ಕಾಂಬೋಧಿ, ಅಟತಾಳ.

ಸ್ವಷ್ಟ ಳವಿಲ್ಲವಯ್ಯ ಭಾಗವತರೇ । ವಳಗೆ ಹೊರಗೆ ಸಂದಣಿ ಭಾಳ ತುಂ ಬಿದೆ ॥ ಪಲ್ಲ ॥ ಐದಕ್ಕೆ ಇದರೊಳು ಉಂಟು । ಮ । ತ್ತೈದು ಐದುಮಂ ದಿಗಳು ಬೇರುಂಟು ॥ ಐದು ನಾಲ್ಕು ದ್ವಾರಗಳುಂಟು । ನಾವು । ಬೈದರೆ ನಿಮ್ಮದೇನು ಹೋದೀತು ಗಂಟು ॥ ೧ ॥ ಆರುಮಂದಿ ಮಕ್ಕಳುಂಟು (ವಕ್ಕಲುಂಟು) । ಮ । ತ್ತಾರುಮಂದಿ ಪ್ರೇರಕರುಂಟು ॥ ಪ್ರೇರಕರಿಗೆ ಕರ್ತರುಂಟು । ವಿ । ಚಾರಮಾಡಲಿಕ್ಕೆ ನಿಮ್ಮದೇನು ತಂಟು ॥ ೨ ॥ ಅತ್ತೆಯೆಂಬೋಳು ಬಲು ಖೋಡಿ । ಎ । ನ್ನೊತ್ತಿ ಆಳುವ ಪುರುಷ ಷೇಡಿ ॥ ಮತ್ತೆ ಮಾವ ಅಡನಾಡಿ । ಸರ । ಹೊತ್ತಿಗೆ ಬಾಹೋನು ಮೈದುನ ಓಡಿ ॥ ೩ ॥ ನೆಗಣ್ಣಿಯೆಂಬೋಳು ಮುಂಗೋಪಿ । ಮಲ

ಮುಗಳು ಕಂಡರೆ ಸೇರಳು ಮಹತಾಪಿ ॥ ಹಗೆಗಾರತ್ತಿಗೆ ಬಲು ಕೋಪಿ । ಇದರ । ಬಗೆ ತಿಳಿಯದ ನಾದಿನಿ ಮಹಾಪಾಪಿ ॥ ೪ ॥ ಎಷ್ಟು ಹೇಳಲಿ ನಿಮಗೆಲ್ಲ । ಈ । ಕಷ್ಟ ಸಂಸಾರದೊಳಗಿಷ್ಟು ಸುಖವಿಲ್ಲ ॥ ಸೃಷ್ಟಿಗೊಡೆಯ ತಾಂ ಬಲ್ಲ । ಸೃಷ್ಟೀಶ । ದಿಟ್ಟ ಪುರಂದರವಿಠಲ ತಾಂ ಬಲ್ಲ ॥ ೫ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೮೧. ರಾಗ ಮಧ್ಯಮಾವತಿ, ಆದಿತಾಳ.

ಸಾಧುಸಜ್ಜನರೊಳಗಿರುವೋದೆ ಹಬ್ಬ । ವೇದಾಂತದರ್ಥವ ತಿಳಿವೋದೆ ಹಬ್ಬ ॥ ೧ ॥ ಭೇದಬುದ್ಧಿಗಳೆಲ್ಲ ಬಿಡುವೋದೆ ಹಬ್ಬ । ಭಾಗೀರಥಿಲಿ ಲೋಲ್ಯಾಡೋದೆ ಹಬ್ಬ ॥ ೨ ॥ ಸಂಕಲ್ಪಸಿದ್ಧಿ ಮನಕೆ ದೊಡ್ಡ ಹಬ್ಬ । ನಿಶ್ಚಿಂತ ಯೋಗಿಗೆ ಅನುದಿನ ಹಬ್ಬ ॥ ೩ ॥ ಸಾಲಯಿಲ್ಲದವನ ಸಂಸಾರದಿ ಹಬ್ಬ । ಶರೀರಕ್ಕೆ ವ್ಯಾಧಿಬಾರದೊಂದೆ ಹಬ್ಬ ॥ ೪ ॥ ಸಂಚಿತ ಕರ್ಮವು ಕಳೆವೋದೆ ಹಬ್ಬ । ಪಂಚಮುಖನಾಭನ ಭಜಿಸುವದೆ ಹಬ್ಬ ॥ ೫ ॥ ಕಂಗಳು ಕಾಶಿಯ ಕಾಂಬೊದೆ ಹಬ್ಬ । ಶ್ರೀವಿಶ್ವಪತಿಯ ಭಜಿಸುವದೆ ಹಬ್ಬ ॥ ೬ ॥ ಭೂಲೋಕದೊಳು ಕಾಶಿವಾಸವೆ ಹಬ್ಬ । ಪುರಂದರ ವಿಠಲನ್ನ ಭಜಿಸುವದೆ ಹಬ್ಬ ॥ ೭ ॥ ಶ್ರೀಃ ॥

## ೮೨. ರಾಗ ದರ್ಬಾರು, ಆದಿತಾಳ.

ಸಾಲಗರಿನ್ನು ಬಿಡುವರೆ ॥ ಪಲ್ಲ ॥ ಬಲು ಜಾಲಗಳನು ಮಾಡಿ ಕಾಲನೂಕಿ ಕಳದರೆ ॥ ಅನುಪಲ್ಲ ॥ ಜಲದೊಳು ಪೊಕ್ಕಡಗಿರಲು । ಬಲು । ಗಿರಿಯನೆ ಪೊತ್ತು ಭಾರವೆಂದೆನಲು ॥ ತಲೆ ಕುಕ್ಕಿ ನೆಲಕ್ಕೆ ಬಗ್ಗಿರಲು । ಹಲ್ಗಳ । ಕಿರಿಕಿರಿದರಿಯೆನೆಂದೆನಲು ॥ ೧ ॥ ಕಾಯವು ವಂಚಿಸಿಕೊಳಲು । ಬಲು । ರಾಯರಗಳಲ್ಲಿ ಹೇಳು ಯೆಂದೆನಲು ॥ ನ್ಯಾಯಕ್ಕೆ ನುಡಿವೇನೆಂದೆನಲೂ । ಬಲು । ಗಾಯತತನದಿಂದ ಕೋಣೆಯೊಳ್ಹೋಗಲು ॥ ॥ ೨ ॥ ಉಟ್ಟದ್ದು ಬಿಟ್ಟು ನಿಂದಿರಲು । ಬಲು । ಕೆಟ್ಟೆನೆಂದು ಕುದುರೆಯ ಪಿಡಿದಿರಲು ॥ ಕೊಟ್ಟದ್ದು ಕೊಡವಲ್ಲೆನೆನಲು । ಘಟ್ಟಿಗ ಪುರಂದರವಿಠಲ ಸಿರಲೂ ॥ ೩ ॥ ಶ್ರೀಃ ॥

## ೮೩. ರಾಗ ಪಂತುವರಾಳಿ, ಛಾಪುತಾಳ.

ಹಣ್ಣು ಬಂದದೆ ಜನರು ಹಣ್ಣು ಕೊಳ್ಳಿರೊ ॥ ಪಲ್ಲ ॥ ಹಣ್ಣು ಯೆಂಬೊ ಹರಿನಾಮ ಯೆಂಬೊ ಶ್ರುತಿಯ ನಿಂಬೆಯಾ ॥ ಅನುಪಲ್ಲ ॥ ಮನದ ಭೂಮಿಯಲ್ಲಿ ಪುಟ್ಟಿ ಮತಿಗಳಿಂದ ಪಲ್ಲವಿಸಿ । ತಮಗೆ ತಮಗೆ ತಿಳದ ಹೊತ್ತು ಭಕುತಿಯಿಂದಲಿ ॥ ಒಲಿದು ಗೊಂಚಲಾದ ಹಣ್ಣು ಜ್ಞಾನ ನೆಂಬೊ ಪಂಜರದ । ತೀಳಿದು ನಾಲಿಗೆಯ ಮೇಲೆ ಬಂದು ಕುಳಿತ ಬಾಳೆಯಾ ॥ ೧ ॥ ಒಂದು ವರುಷ ಒಂದು ಫಲವು ಬಿತ್ತಿ ಬಂದ ಮಹಾ ರಾಮ । ಚಂದ್ರರೆಂಬೊ ಕಲ್ಪವೃಕ್ಷ ಕದಳಿ ಸಂತತಿ ॥ ಕುಂದದಿಹದು ಸಕಲ ಫಲವು ಅಲ್ಲಿ ಗೊನೆಗೂಡಿ ಗೋ । ವಿಂದ ರಾಮ ವಾಸುದೇವ ನೆಂಬೊ ಹಲಸಿನಹಣ್ಣು ॥ ೨ ॥ ಹರಿಯ ನಾಮವನ್ನು ನಿತ್ಯ ಸ್ಮರಿಸಬಲ್ಲ ವಿಪ್ರರಿಗೆ । ಸುರರು ಮುನಿಗಳೆಲ್ಲ ಬಾಯಿವರೆಲ್ಲಯ್ಯ ॥ ಗಿರಿಯ ಮೇಲಿಪ್ಪ ಅಲಮೇಲು ಮಂಗ ಅರಸನಾದ । ಪುರಂದರವಿಠಲನೆಂಬೊ ಜಂಬು ನೇರಲೇ ॥ ೩ ॥ ಶ್ರೀಃ ॥

## ೮೪. ರಾಗ ಉದಯ, ಅಟತಾಳ.

ಹರಿಯ ದಿವ್ಯನಾಮ ॥ ಪಲ್ಲ ॥ ಹರಿಯ ದಿವ್ಯನಾಮ ಮರದು ಬಾಯಿಲಿ ಒರೆ । ಮರದೊಮ್ಮೆ ಜನ್ಮ ತಾನೆಲ್ಲಿಹದೋ ॥ ಅನುಪಲ್ಲ ॥ ನಾರಗಾ ನೆನ್ನಲು ಕೇಳಿ ನಾರಾಯಣ ಕ್ಷೀರಸಾಗರದಲ್ಲಿ ಮಲಗಿಹಲು । ಬೇಗ ದಿಂದಲೆ ಒಡಗೊಂಡು ಬನ್ನಿರೊ ಅಜಮಿಳನ ಬಾಧಿಸುತ ಧರೆ ಯಮ ದೂತರು ॥ ೧ ॥ ಅಚ್ಚ ತುಲಸಿದಂಡೆ ಹಸ್ತದಲಿ ಶಂಖ ಚಕ್ರ ಒಪ್ಪುವ ಊರ್ಧ್ವಪುಂಡ್ರ ವಜ್ರಪಂಜರ । ವಿಷ್ಣು ಸರ್ವೋತ್ತಮ ಕರುಣಾಕರ ಹರಿಯೆಂದು ಕೃಷ್ಣರಾಯರ ಸ್ತುತಿಸುತ ಬಂದರಯ್ಯಾ ॥ ೨ ॥ ಅಂಜದಿ ರಂಜದಿರಜಮಿಳನೆ ಗೋವಿಂದ ನಿಮ್ಮನು ಕರಿಸಿದರು ಬಾರಯ್ಯ । ಕೊಂಡ್ಹೋಗಿ ಲಕ್ಷ್ಮೀಪತಿಯಿದ್ದಲ್ಲಿಗೆ ಬಂದದೆ ಪುಷ್ಪವಿಮಾನದೊಳು ನಿಂದಿರಿಸುವ ॥ ೩ ॥ ಪಾತಕವು ಹರಿದವು ದೂತರೋಡಿದರು ಸಾತ್ವೀಕ ಧರ್ಮಿಯೆಂದೆನಿಸಿಕೊಂಡಿ ಶ್ರೀ । ಪತಿಯ ಪುಷ್ಪಕವನೇರಿ ವೈಕುಂಠ

ಯಾತ್ರೆ ಮಾಡಿದಜಮಿಳನು ॥ ೪ ॥ ಸಕಲ ಪಾಪವು ಮಾಡಿದನಜಮಿಳನು ಅಮಲಕೀರ್ತಿ ಪಡದು ಬಂದ ನೋಡಿರೊ । ಲಕ್ಷ್ಮೀನಾರಾಯಣ ಪುರಂದರವಿಠಲನ್ನ ಭಕ್ತವತ್ಸಲನೆಂಬ ಬಿರುದಲ್ಲವೇ ॥ ೫ ॥ ಶ್ರೀ ॥

೬೫. ರಾಗ ಯಮುನಾಕಲ್ಯಾಣಿ, ಏಕತಾಳ.

ಹರಿಸ್ಮರಣೆ ಮಾಡೋ ನಿರಂತರ ॥ ಪಲ್ಲ ॥ ಪರಗತಿಗೆ ಇದು ನಿರ್ಧಾರ ॥ ॥ ಅನುಪಲ್ಲ ॥ ದುರಿತಗಜಕ್ಕೆ ಕಂಠೀರವನೆನಿಸಿದ । ಶರಣಾಗತರಕ್ಷಕ ಪಾವನ ನೀ ॥ ೧ ॥ ಸ್ಮರಣೆಗೈದು ಪ್ರಹ್ಲಾದನ ರಕ್ಷಿಸಿದ । ದುರುಳ ಹಿರಣ್ಯಕನ್ನುದರವ ಶೀಳಿದ ॥ ೨ ॥ ತರುಣಿ ದ್ರೌಪದಿ ಮೊರೆಯಿಡಲಾಕ್ಷಣ । ಭರದಿಂದಕ್ಷಯನಿತ್ತ ಮಹಾತ್ಮನ ॥ ೩ ॥ ಅಂದು ಅಜಾಮಿಳ ಕಂದನ ಕರೆಯಲು । ಬಂದು ಸಲಹಿ ಆನಂದವು ತೋರಿದ ॥ ೪ ॥ ಶ್ರೀಶ ಪುರಂದರವಿಠಲರಾಯನ । ಸೃಷ್ಟಿಗೊಡೆಯನ ಮುಟ್ಟಿ ಭಜಿಸಿ ನೀ ॥ ೫ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೬೬. ರಾಗ ಕಾಂಬೋಧಿ, ಝಂಪೆತಾಳ.

ಹರಿ ಸ್ಮರಿಸಿ ಹರಿ ಭಜಿಸಿ । ಹರಿಯ ಮನದೊಳಗಿರಿಸಿ । ಹರಿಪಾದನಾಶ್ರೈಸಿ । ಹರಿದಾಸನೆಂದೆನಿಸಿ ॥ ಪಲ್ಲ ॥ ಘೋರಕರ್ಮವ ಮಾಡಿ ಅನುಭವಿಸಿದಜಮಿಳ । ಕಡುಮೋಹದಿ ನಾರಾಯಣನ ನೆನದು । ಹರಿ ಮಹಾಮಹಿಮನಾ ಚರಣದುಗುರಿನ ಧ್ಯಾನ । ಶಿರಿ ಬ್ರಹ್ಮ ಶಿವರೆಲ್ಲ ಮಾಡುತಲಿಹರು ॥ ೧ ॥ ಅಸುರಕುಲದಲಿ ಜನಿಸಿ ಮಧ್ವಮತ ಅನುಸರಿಸಿ ಅದ್ವೈತ ಅಯಿಕ್ಯವೆಂದು ಪೇಳುವರ ಸಂಹ। ರಿಸಿ ವಿಷ್ಣುಪದವಾಶ್ರೈಸಿ ಅನ್ಯಮತ । ಹುಸಿಯೆನಿಸಿ ಪ್ರಹ್ಲಾದ ನರಸಿಂಹ ಭಕ್ತನೆಂದೆನಿಸಿ ॥ ೨ ॥ ಭೂಪತಿ ಪ್ರಾರಬ್ಧಕರ್ಮದಲಿ ಮುನಿ । ಶಾಪರಾದ ಗಜಯೋನಿ ಜನಿಸಿ ಹಲವು । ಕಾಲ ಜಲದೊಳಗಾ ನೆಗಳ ಬಾಯಿಲಿ ಸಿಲುಕಿ । ಪುರಂದರವಿಠಲನ್ನ ನಿಜಪದವಿ ಸೇರಿದಾ ॥ ೩ ॥ ಶ್ರೀ ॥

## ೮೭. ಶ್ರೀರಾಗ, ಆದಿತಾಳ.

ಹಾಲು ಮಾರಲು ಬಂದೇವಮ್ಮಾ ಈ ಮಧುರಾಪುರಕ್ಕೆ ॥ ಪಲ್ಲ ॥ ಶೀರೆ ಶೃಂಗಾರದ ಕುಪ್ಪಸವ ತೊಟ್ಟು ಹರಿನಾಮಗಳಿಟ್ಟು । ದೋರೆ ಭಂಗಾರದ ಬಳೆ ಕೈಕಟ್ಟು ಕಳವಳಿಸುತಲಿಟ್ಟು । ಕ್ಷೀರದ ಬುಟ್ಟಿ ಶಿರದಲ್ಲಿಟ್ಟು ॥ ಮಾರಬಂದವೆ ನಂದನ ಕಂಡು । ದಾರಿವಳಗೆ ನಮ್ಮ ಗೊಲ್ಲನ ಕಂಡು । ತಾರೆಂದು ಸುಂಕವ ಕರಹಿಡುಕೊಂಡು । ಘೋರಿಸಿ ತನವುಟ್ಟ ಶೀರೆಯ ಶೆಳೆಕೊಂಡು ॥ ೧ ॥ ಎಷ್ಟು ಹಟದವನೆ ಕೃಷ್ಣ ಚೋರ ಮುತ್ತಿನಸರ । ಕಟ್ಟಾಣಿ ಗುಂಡಿನ ಜ್ಯೋಕಂಥವಳದಸರ ನೀಲದುಂಗುರ ॥ ಕೊಟ್ಟೇನೆಂದರೆ ರೊಕ್ಕಗಳಿಲ್ಲ । ಕೃಷ್ಣ ಆವರ್ಮಾತ ಕೇಳುವನಲ್ಲ । ಇಷ್ಟು ಮಾತಿಗೆ ದಿಟ್ಟ ಮೋರೆಗೊಲ್ಲ ॥ ೨ ॥ ಬಾಲೆ ಬಾಯೆಂದು ಬಣ್ಣಿಸಿ ಕರಿವ ಹಸ್ತಗಳನೆ ಮುಗಿವ । ತೋಳು ತೊಡೆ ಗಲ್ಲವ ಕುಚಗಳ ಪಿಡಿವ ಗಡಿಗೆಯ ವಡಿವ । ಥಾಲಿ ಥಾಲಿ ಹಾಲ್ಮೊಸರನೆ ಸುರಿವ ॥ ಕಾಲಿಬಿಪ್ಪೆವೇ ಕಾಡಬೇಡೆಂದು । ಭಾಳ ಹೊತ್ತಾಗಿತು ಹೋಗಬೇಕೆಂದು ಶ್ರೀಹರಿ ಪುರಂದರವಿಠಲನ ದಯದಿಂದ ॥ ೩ ॥ ಶ್ರೀ॥

## ೮೮. ರಾಗ ಶಂಕರಾಭರಣ, ಅಟತಾಳ.

ಹೆಣ್ಣು ಕೊಟ್ಟತ್ತೆಮಾವಂದರ ಮನೆಯಲ್ಲಿ ಶೇರಿಯಿರುವರೇ ಯೆಲ ಮನುಜಾ ॥ ಪಲ್ಲ ॥ ಬಂದ ಮೊದಲು ಇತ್ತ ಬನ್ನಿ ಕುಳ್ಳಿರೆಂದು ಬಲು ಉಪಚರಿಸುವರು । ಅಂದಿನ ಮರುದಿನ ಬಂದ ಸ್ನೇಹಿತರನ್ನು ಕಂಡಂತೆ ಕಾಣುವರೋ ॥ ಬಂದ ಮೂರಲ್ಲಿ ಪರದೇಶಿಯ ಕಂಡಂತೆ ಸಡ್ಡೆ ಮಾಡದೆ ಇಹರೋ । ಮುದನಾಗಿ ನಾಲ್ಕು ದಿವಸವು ಇದ್ದರೆ ಮಾನಭಂಗವ ಮಾಡಿ ಮಾತಾಡುವರೋ ॥ ೧ ॥ ಐದನೆ ದಿನದಲಿ ಆಕಳು ಬರಲಿಲ್ಲ ಅರಸಿ ತರಬೇಕೆಂಬರೋ । ಇಂದೆಮ್ಮಗೆ ಕಲಗಿಚ್ಚುನಿಕ್ಕದೆ ಯೆಲ್ಲಿಹೋದರೆಂಬೋರೋ ॥ ಬೀದಿಯಲ್ಲಿ ಕಸ ಬೆಟ್ಟವಂತೆ ಬಿದ್ದದೆ ಭೇದವೆ ನಿಮಗೆಂಬೋರೋ ।............॥ ೨ ॥ ಷಷ್ಠಿಯ ದಿನದಲ್ಲಿ ಅಟ್ಟಡಿಗೆಯು ಆರಿಹೋಯಿತು ನಿಮಗೆ ಆಳುವೆ ಯೆಂತೆಂಬೋರೋ । ಎಷ್ಟೆಂತ ನಿಮ್ಮ

ಧ್ಯಾನಸ ಯೇಳಬಾರದೆಂಬೋರೋ ॥ ಅಷ್ಟಮ ಶನಿಯಿದು ಬಿಟ್ಟು ಹೋಗದು ನಮಗೆ ಅಳವಿಲ್ಲ ಯೆಂತೆಂಬೋರೋ । ಇಷ್ಟು ಬಿಟ್ಟು ಶ್ರೀ ಪುರಂದರವಿಠಲನ್ನ ಇಹಪರವೆರಸಿಕೊಳ್ಳೊ ಮನುಜಾ ॥ ೨ ॥ ಶ್ರೀಃ ॥

## ೮೯. ರಾಗ ಕಲ್ಯಾಣಿ, ಅಟತಾಳ.

ಹೇಳಬಾರದೆ ಬುದ್ಧಿಯ ನಿನ್ನ ಮಗನ ಊರುಘೂಳಿಯ ಮಾಡಿದೇವೇ ॥ ಪಲ್ಲ ॥ ಓಣೋಣಿಗುಂಟಿ ವಾರಿಗೆವರ ಕೂಡಿ ಗೋವಳೇರ ಕೇರಿ ಹಾಳುಮಾಡುತಿದ್ದಾನೆ ॥ ಅನುಪಲ್ಲ ॥ ಅಟ್ಟದ ಮೇಲಿಟ್ಟ ಚೆಟ್ಟಿಗೆ ಹಾಲವ ಬೊಟ್ಟನಿಕ್ಕಿ ಚೀಪುವ । ದುಷ್ಟತನ ಮಾಡಬೇಡವಯ್ಯಾವೆನ್ನ ಕಷ್ಟವೇನೆನುತಲಿ ಮುದ್ದಿಟ್ಟು ಓಡಿದಾ ॥ ೧ ॥ ಮೊಸರ ಸೋದಿಸುತಿರಲು ಬಂದು ಕುಳಿತ ಹಸುಗೂಸು ಯೆನುತಿದ್ದೇನೆ । ಕುಸುಮನಾಭ ತನ್ನ ವಶವಾಗು ಯೆನುತಲಿ ಮುಸುಕು ತೆಗದು ಕುಚ ಹಿಚಿಕಿ ಪೋದನಲ್ಲೆ ॥ ॥ ೨ ॥ ಬೆಣ್ಣೆಯ ಕಂಡರಂತು ಅದರ ರೂಪ ಕಣ್ಣಿಗೆ ತೋರನಲ್ಲಾ । ಸಣ್ಣವನೆಂದು ನಾ ಬಾಯೆಂದು ಕರದರೆ ಬಣ್ಣಿಸಿ ಮಾತಾಡಿ ಬಾ ಯೆಂದು ಕರದನೆ ॥ ೩ ॥ ಉಡುವ ಶೀರೆಯ ಕಳದು ಥಡಿಯಲ್ಲಿಟ್ಟು ಮಡುವಿನೊಳು ಮೈತೊಳಿಯೆ । ಧಡಧಡ ಬಂದಾವು ಕಡಹದ ಮರ ನೇರಿ ಕೊಡು ಕೃಷ್ಣಾ ಯೆನುತಿರೆ ಪಿಡಿ ಜೋಡ ಕೈಯೆಂಬ ॥ ೪ ॥ ಎಷ್ಟು ಹೇಳಲಿ ಯಶೋದೆ ನಿನಗೆ ಒಂದಿಷ್ಟು ಕರುಣವಿಲ್ಲವೇನೇ । ಸೃಷ್ಟಿಗೊಡೆಯ ನಮ್ಮ ಪುರಂದರವಿಠಲನ್ನ ಯೆಷ್ಟು ಹೇಳಲಿ ಇನ್ನು ಅಷ್ಟಷ್ಟು ನಿನ್ನ ಮುಂದೆ ॥ ೫ ॥ ಶ್ರೀಃ ॥

## ೯೦. ರಾಗ ಕಾಪಿ, ಆದಿತಾಳ.

ಒಳ್ಳೆವೊಳ್ಳೆದು ಎಲ್ಲಾ ಸ್ಥಳವ ಬಿಟ್ಟು । ಇಲ್ಲಿ ಅಡಗಿದ್ಯಾ ಬಲ್ಲಿದತನವೇ ॥ ಪಲ್ಲ ॥ ಬಿಡೇ ಬಡೇನೊ ಎನ್ನ ಒಡೆಯ ತಿರುಮಲ ನಿನ್ನ । ಉಡಿಯ ಪೀತಾಂಬರ ಪಿಡಿದು ಸಲ್ಲಿಸಿಕೊಂಬೆ ॥ ೧ ॥ ಎರವು ಎರವು ಮಾಡಿ ತಿರಿಗಿಸಿ ಎನ್ನ । ಕೊರಳಿಗೆ ನಿನ್ನ ಚರಣ ಕಟ್ಟಿಕೊಂಬೆ ॥ ೨ ॥

ಅತ್ತೆಯ ಮಕ್ಕಳಿಗೆ ತೆತ್ತಿಗ ನೀನಾಗಿ । ವಿತ್ತವಿತ್ತದ ರಾಶಿ ತಂದಿತ್ತ ಪರಿಯಲಿ ॥ ೩ ॥ ಅತ್ತ ಇತ್ತಲಿ ನೋಡಿನ್ನೆತ್ತ ಪೋಗಲಿ ನಿನ್ನ । ಚಿತ್ತ ದಲಿ ಹತ್ತಗಟ್ಟಿಕೊಂಬೆ ॥ ೪ ॥ ಇರುಳು ಹಗಲು ಬಿಡದೆ ಗುರು ಪುರಂದ ರಗೊಲಿದೆ । ಅರಿದು ಯೇನು ಇಷ್ಟು ಪುರಂದರವಿಠಲನೇ ॥ ೫ ॥ ಶ್ರೀ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೯೧. ರಾಗ ಸಾವೇರಿ, ಛಾಪುತಾಳ.

ಕಂಡನ ಕಾಣಿರೇನೆ ಗೋಪಿಯ ಕಂದ ॥ ಪಲ್ಲ ॥ ಕಂಡನಲ್ಲವೆ ಎನ್ನ ಕುಂದಣವರಗಿಣಿಯೆ ॥ ಅನುಪಲ್ಲ ॥ ಉಂಗುರಸಿಟ್ಟಿದ್ದ ಉಡಿದಾರ ಕಟ್ಟಿದ್ದ ಭಂಗಾರದ ಟೊಪ್ಪಿಗೆ ತಲೆಯಮೇಲಿಟ್ಟ ॥ ೧ ॥ ರೊಟ್ಟಿಯ ಸುಟ್ಟಿದ್ದ ತುಪ್ಪವ ಕಾಸಿದ್ದ । ಇಷ್ಟು ಹೊತ್ತು ಹೋಯಿತು ಉಣಲಿಲ್ಲ ॥ ೨ ॥ ಕಾಶಿಗೆ ಹೋಗಿ ನಾ ಕೂಸಿನ ಪಡದೇ ಪುರಂದರವಿಠಲ । ದಾಸರಿಗೆ ತಕ್ಕ ಮಗುವೇನಮ್ಮವ್ವಾ ॥ ೩ ॥ ಶ್ರೀ ॥

## ೯೨. ರಾಗ ಹುಸೇನಿ, ಅಟತಾಳ.

ಗೋವಿಂದಾ ಹರಿ ಗೋವಿಂದಾ ॥ ಪಲ್ಲ ॥ ನಿಂತರೆ ನೆಳಲಿಲ್ಲ ಹಿಡಿ ಯಲಿ ಕೊಂಬಿಲ್ಲ । ಎತ್ತ ತೋರುವೆ ಎನ್ನ ಕರ್ತೃ ವಿಚಾರಿಸೋ ॥ ೧ ॥ ಸುತ್ತಮುತ್ತಲಿದ್ದ ಕತ್ತಲೆದೊಳಗೆಂಬ । ಎತ್ತೆತ್ತೋರುವೆ ಎನ್ನ ಕರ್ತೃ ವಿಚಾರಿಸೋ ॥ ೨ ॥ ಸುರನರರಿಗೆಲ್ಲ ನೀನೆ ಗತಿಯೆಂದು । ಪುರಂದರ ವಿಠಲ ಸ್ವಾಮಿ ವಿಚಾರಿಸೋ ॥ ೩ ॥ ಶ್ರೀ ॥

## ೯೩. ರಾಗ ಕಾಂಬೋಧಿ, ಆದಿತಾಳ.

ತ್ವಂ ಶಾರದಂ ॥ ಪಲ್ಲ ॥ ಒಂದೆಂಟು ಲೆಖ್ಖದ ದ್ವಾರ । ಅದು । ಒಂದು ದಿನ ತೊಳಿಯದಿದ್ದರೆ ವಿಕಾರ । ಸಂದು । ಸಂದಿಲಿ ಕ್ರಿಮಿರಾಶಿ ಘೋರ । ಅದು । ಶುಕ್ಲಶೋಣಿತ ಸಂಬಂಧ ಶರೀರ ॥ ೧ ॥ ಕಣ್ಣಿಂದ ಸಿಕ್ಕು ಸೋರುವದು । ಮೂಗು ।- ಕಣ್ಣಿಂದ ಶ್ಲೇಷ್ಮ ತೋರುವದು । ಅದು ।

ಉಣದಿದ್ದರೆ ಎಂಜಲವುದು । ನಿನ್ನ । ಪ್ರಾಣಬಿಟ್ಟರೆ ದುರ್ಗಂಧ ನಾರು ವದು ॥ ೨ ॥ ಕಣ್ಣ ಮುಚ್ಚಿ ಕಣ್ಣ ತೆರೆವ । ಅವ । ಬಣ್ಣಬಣ್ಣದ ತತ್ವ ನೊರೆವ । ಪರ । ಹೆಣ್ಣಿಗಾಗಿ ತಾನು ಜರಿವ । ಒಳ್ಳೆ । ಪುಣ್ಯವಂತನ ನೋಡಿ ತನ್ನೊಳಗೆ ತಾನೆ ಜರಿವ ॥ ೩ ॥ ಮಾತಿನಲ್ಲಿ ಹರಿದಾಸ । ಅವ । ನೀತಿಯಲ್ಲಿ ಬ್ರಹ್ಮರಾಕ್ಷಸ । ಅವ । ಭೀತಿಯಿಲ್ಲದೆ ಬ್ರಹ್ಮದ್ವೇಷ । ಮಾಡಿ । ಸಾತ್ವಿಕನೆನಿಸುವದು ಪರಿಹಾಸ ॥ ೪ ॥ ವೈದೀಕವೃತ್ತಿಯನೆ ಎತ್ತಿ । ಅವ । ಓದನಕೆ ಮನೆಮನೆಯ ಸುತ್ತಿ । ಅತಿ । ಮೋದದಲಿ ಸತಿಯೊ ಡನೆ ಮುತ್ತಿ । ಬಲು । ಬಾಧಿಸುತ ಅಪನೊದನವೊತ್ತಿ ॥ ೫ ॥ ಪುರಾ ಣೀಕನಾಗಿ ಪುಟ್ಟಿ । ಅವ । ಥರಥರ ಜೋಳೀರ ಕೂಟವ ಕಟ್ಟಿ । ಬಹು । ಜನ್ರಲ್ಲಿ ಪಿಟಿಪಿಟಿಗುಟ್ಟಿ । ಹಣ । ಬಾರದೊ ಬಾಹೊದೊ ಎಂಬಲ್ಲಿ ದೃಷ್ಟಿ ॥ ೬ ॥ ಯಾಪಾರ ತಾನು ಎಂದೆನಿಸಿ । ... । ಭೂಪತಿ ಸೇವೆ ಅಂಗೀಕರಿಸಿ । ಆ । ಪಾಪದ ದ್ರವ್ಯ ಸತ್ಕರಿಸಿ । ವೇಶ್ಯಾ । ಸ್ತ್ರೀಪಾ ಲನೆಮಾಡಿ ಕೊನೆಯ ಸಮ್ಮತಿಸಿ ॥ ೭ ॥ ಸತ್ಶಾಸ್ತ್ರ ಶ್ರವಣವನೆ ಮಾಡಿ । ಗೋ । ವತ್ಸದಂತೆ ಗುರುಗಳ ಹಿಂದೆ ಓಡಿ । ... । ಕುತ್ಸಿತರ ಸಂಗವಿ ಡ್ಯಾಡಿ । ಮದ । ಮತ್ಸರ ತೊರೆದು ಹರಿದಾಸರೊಳಗಾಡಿ ॥ ೮ ॥ ಅದ್ವೈತಮತಗಳನೆ ಜರಿದು । ಗುರು । ಮಧ್ವರಾಯರೆಂಬೊ ಬಿರಿದು । ನಮ್ಮ । ಮುದ್ದು ಪುರಂದರವಿಠಲನ್ನ ಅರಿದು । ಅವ । ಶುದ್ಧಾತ್ಮನಾಗಿ ಸುಖದಲ್ಲಿರಬಹುದು ॥ ೯ ॥ ಶ್ರೀ ॥

## ೯೪. ರಾಗ ಶಂಕರಾಭರಣ, ಅಟತಾಳ.

ದಾರೇನಂದರೂ ರಂಗಯ್ಯ ನಿನ್ನ ದಾರೇನಂದರೊ ॥ ಪಲ್ಲ ॥ ದಾರೇ ನಂದರು ಭೂಸುರಲೋಕದ ಕೃತ್ಯ । ತ್ರಿಜಗವಂದಿತ ಮುರಹರ ಮೋಹನ ನಿನ್ನ ॥ ೧ ॥ ಸಕ್ಕರೆ ಚೀನಿಪಾಲು ನರಸತನುವಿನ । ಉಕ್ಕುವ ನೊರೆ ಹಾಲುಗಳ ಮುದ್ದು ರಂಗಯ್ಯ ನಿನ ॥ ೨ ॥ ಕಿರಿನೆಗೆಯಲಿ ಕಿರುಗೆಜ್ಜೆಯು ಮಾಗಾಯಿ ಒಪ್ಪೆ । ಕಿರುಗೆಜ್ಜೆ ಘಲುಘಲು ಯೆಂದು ಕುಣಿವನ ॥ ೩ ॥ ಸಕಲ ಭಾಗವತರು ಗತಿ ತಾಳದಿಂದ । ತಕ್ಕಿಕು ತಕ್ಕಿಕು ತಧಿಮಿಕೆಂದು

ಕುಣಿಪ ನಿನ್ನ ॥ ೪ ॥ ವೃಂದಾವನದಿ ಗೋವಿಂದಾ ಗೋಪಿಯ ಕಂದ । ಮಂದರೋದ್ಧರ ಮುದ್ದು ಮುಖದ ಚಲುವನೆಂದು ನಿನ್ನ ॥ ೫ ॥ ಥಳ ಥಳಿಸುವ ತೆಳಿಗಣ್ಣಿನ ಸೊಬಗಿನ । ಎಳಿನಗೆ ಸುಳಿನಗೆಯೆ ಮುದ್ದಿಗ್ಯಾ ನಿನ್ನ ॥ ೬ ॥ ಅಂದು ಅಜಾಮಿಳನು ನಾರಗಾ ಯೆಂದು ಕರಿಯಲಾಗಿ । ವೈಕುಂಠಕ್ಕೆ ವೈದಿಯೋ ದ್ವಾರಕಾ ಕೃಪಾಳು ನಿನ್ನ ॥ ೭ ॥ ತರಳನ ಮಾತ ಕೇಳಿ ಸ್ತಂಭದಿಂದ ಉದ್ಭವಿಸಿದಿ । ಹಿರಣ್ಯಕಶ್ಯಪನ ಬಾಧೆಯ ಬಿಡಿಸಿದಿಯೋ ದೇವ ॥ ೮ ॥ ಕರುಣಾಕರ ನಮ್ಮ ಪುರಂದರವಿಠಲ । ಕರದು ಭಕ್ತರಿಗೆಲ್ಲ ವರವ ಕೊಡುವ ಸ್ವಾಮಿ ನಿನ್ನ ॥ ೯ ॥ ಶ್ರೀಃ ॥

## ೯೫. ರಾಗ ಪಂತುವರಾಳಿ, ಛಾಪುತಾಳ.

ನಂಬಿ ಭಜಿಸಿರೋ ಜನರು ನಂಬಿ ಭಜಿಸಿರೋ ॥ ಪಲ್ಲ ॥ ನಂಬಿ ಭಜಿಸಿ ಜನದ ಡಂಭಕತನವ ಬಿಟ್ಟು । ಅಂಬುಜಾಕ್ಷ ಚಾಣೂರಮಲ್ಲಾರಿಯ ॥ ॥ ಅನುಪಲ್ಲ ॥ ಚಲ್ಲಣವ ಉಟ್ಟು ತೊಟ್ಟು ಮಲ್ಲಗಟ್ಟು ಬಿಗಿದು ಕಟ್ಟಿ ಗೋವ । ಕಿಲ್ಲರೊಡನೆ ಕೂಡಿ ಪೊಕ್ಕು ಮಲ್ಲರಂಗವ ಬಲರಾಮ ಕೂಡಿ ಆಡಿ ಕು । ವಲಯಾಬನವ ಪಿಡಿದು ಇಂಥಾ । ಬಿಲ್ಲನು ಲಗುಮಾಡಿದ ನೆಂಬ ಮಲ್ಲಾರಿಯ ॥ ೧ ॥ ಅಟ್ಟಿಗುಟ್ಟಿ ತೋಳು ತೊಡೆಯ ತಟ್ಟಿ ಬೊಬ್ಬೆ । ನಿಟ್ಟು ಬೆನ್ನಟ್ಟಿ ಗಗನಕ್ಕೆ ವಟಿನಳವುತ । ಬಿಟ್ಟ ಮುಷ್ಟಿಗಸ ಗೋಣು ಮೆಟ್ಟಿತುಳ ರಜಗ । ಜೆಟ್ಟಿ ಮೆರದ ಚಾಣೂರಮಲ್ಲಾರಿಯ ॥ ॥ ೨ ॥ ಕೊಂಬು ಕೊಳಲು ಜೆಕ್ಕೆ ಡೊಕ್ಕೆ ಬೊಭಳಿಯಲ್ಲಿ ಬಾರಿಸುತ್ತ । ಭೊಂ ಭೊಂ ಭೊಂ ಭೊಂ ಭೊಂ ಯೆಂಬ । ರಭಸದಿ ಶಂಭುರನ್ನ ಮಾಯವಿಡಲು । ಅಂಬುಧಿಯೊಳಗಲ್ಯಾಡಿ । ಅಂಬುಜಾಕ್ಷ ಚಾಣೂರ ಮಲ್ಲಾರಿಯ ॥ ೩ ॥ ಮುಂಡೆ ಗಲ್ಲವ ಪಿಡಿದು ದೈತ್ಯ ಬಿಡದೆ ಬಲದ । ಮೊಡ್ಡ ಚಾಂಡವ ಚಾಣೂರ ಶಿರವ ಕಡಿಯುತ । ಖಂಡು ತುಂಡ ಮಾಡಿ ಅಸುರ । ಕಂಡು ಹಾಹಾ ಯೆನಲು ಜಗದಿ ಮೆರವ ಚಾಣೂರ ಮಲ್ಲಾರಿಯಾ ॥ ೪ ॥ ಮಾವನ ಶಿರವ ಕಡಿದು ದೇವಕ್ಕಿಗೆ ಸಂತೋಷ ವಿತ್ತ । ದೇವ ಉಗ್ರಸೇನಗೊಲಿದು ಪಟ್ಟಗಟ್ಟಿದ । ದೇವತೆಯರು ಗಗನ

ವಲ್ಲಿ ಪೂವಿನಮಳೆ ಕರಿಯಲಾಗಿ । ದೇವ ಪುರಂದರವಿಠಲರಾಯ ತಾನು ಮೆಚ್ಚಿದಾ ॥ ೫ ॥ ಶ್ರೀ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೯೬. ರಾಗ ಕೇದಾರಗೌಳ, ಝಂಪುತಾಳ.

ನಾನ್ಯಾಕೆ ಪರದೇಶಿ ನಾನ್ಯಾಕೆ ಬಡವನು ॥ ಪಲ್ಲ ॥ ಘನ್ನ ಮಾನಾಭಿಮಾನಕ್ಕೆ ವಿಠಲ ನೀನಿರಲಾಗಿ ॥ ಅನುಪಲ್ಲ ॥ ಮೂರುಲೋಕದ ಅರಸು ಶ್ರೀಹರಿ ಎನ್ನ ತಂದೆ । ವಾರಿಜಾಮುಖಿ ಲಕುಮಿ ಎನ್ನ ತಾಯಿ ॥ ಮೂರು ಅವತಾರದ ಹನುಮಂತ ಎನ್ನ ಗುರು । ಹರಿಭಕ್ತಜನರೆಲ್ಲ ಬಂಧುಬಳಗಿರಲಾಗಿ ॥ ೧ ॥ ಇಪ್ಪತ್ತುನಾಲ್ಕು ಅಕ್ಷರವೆಂಬೊ ಹಳೇ ನಾಣ್ಯ । ಮುಪ್ಪದಿಂದಲಿ ಕುಳಿತು ಉಣಲಿಬಹುದು ॥ ತಪ್ಪದೆ ನವವಿಧ ಭಕ್ತಿ ಜ್ಞಾನಗಳಿಂದ । ಮುಪ್ಪುಯಿಲ್ಲದ ಭಾಗ್ಯ ಎನ್ನಲ್ಲಿ ಇರಲಾಗಿ ॥ ೨ ॥ ನಿನ್ನ ನಂಬಿದವರ ಒಲಿವಿರೋ ಶ್ರೀಹರಿ । ನಿನಗಿಂತ ಇನ್ನು ಒಲಿವರು ಇಲ್ಲವೋ ॥ ಪನ್ನಂಗಶಯನ ಶ್ರೀಪುರಂದರವಿಠಲನ । ಚರಣ ಅನುಮಾನವಿಲ್ಲದೆ ಎನ್ನ ಶಿರದಲ್ಲಿರಲಾಗಿ ॥ ೩ ॥ ಶ್ರೀ ॥

## ೯೭. ರಾಗ ಬ್ಯಾಗ್, ಅಟತಾಳ.

ನಾನು ಬೇರಮಾಡುವೆ ಎನ್ನ ನಾಲಿಗೆಯೆಂಬೊ ಎತ್ತನೇರಿಕೊಂಡು ॥ ॥ ಪಲ್ಲ ॥ ತನುವೆಂಬದೇ ಒಂದು ಗೋಣಿಯಲ್ಲಿ । ರಾಮನಾಮವೆಂಬೊ ಸರಕು ತುಂಬಿಕೊಂಡು ॥ ೧ ॥ ಇಂದ್ರಿಯಗಳೆಂಬ ಸುಂಕದವರಡ್ಡ ಬಂದರೆ ಮು । ಕುಂದಮುದ್ರೆಯ ತೋರಿಸಿ ಹೊಡದಾಡಿ ॥ ೨ ॥ ಅಜಲಾನಂದ ಪುರಂದರವಿಠಲನಲ್ಲಿ ಪೋಗಿ । ಪ್ರಚುರ ಭಕ್ತಿಯನಿತ್ತು ಮುಕ್ತಿಯ ಪಡೆದು ॥ ೩ ॥ ಶ್ರೀ ॥

## ೯೮. ರಾಗ ನೀಲಾಂಬರಿ, ಏಕತಾಳ.

ನಿನ್ನ ನಾಮವ ನೆನೆದು ಪುನೀತನಾದೆನೋ । ಮನ್ನಿಸಿ ಸಲಹಯ್ಯ ಮದನಜನಕ ಕಲ್ಯಾಣ ಕರಿವರದಾ ॥ ಪಲ್ಲ ॥ ಮಹಾರಣ್ಯ ಸರಸ್ಸಿನಲ್ಲಿ

K 218

ಮಕರಿ ಬಾಯೊಳಗೆ ಸಿಲ್ಕಿಕೊಂಡು । ಮಹಾಸಾಮಜನ ಕರದಿಡಿದೆಳೆ ವಾಗೆ ಸಹಾಯ ಒಬ್ಬರ ಕಾಣೆ ॥ ಗಹನದಲಿ ಅಹೋ ವರದಾ ಎಂದು ಕೂಗಿದಾಕ್ಷಣದಲಿ। ಸ್ನೇಹದಿಂದಲಿ ನೀನಂಜಬೇಡೆಂದು ಮುಂದೆ ನಿಂದು ಕಾಯಿದ ಧೊರೆಯೇ ॥ ೧ ॥ ನಿಜಮತಿಯಾಗಿ ಪಾಪಗಳು ಮಾಡಿ ನಿರ ಯಾಣ ಸಮಯದಲಿ ಹೇ । ಸುಜನರಕ್ಷಕನೆಂದರಿಯದೆ ತನ್ನ ತ । ನುಜ ನಾರಾಯೆಂದಾಕ್ಷಣದಲ್ಲಿ ನೀ । ನಂಜಬೇಡೆಂದು ಮುಂದೆ ನಿಂದು ಕಾಯಿದ ಧೊರೆಯೇ ॥ ೨ ॥ ರಜಸ್ವಲೆಯಾದ ದ್ರೌಪದಿಯ ತಂದು ಪಾಪಿ ದುರ್ಯೋಧನನು ಧ । ರ್ಮಜ ಮೊದಲಾದವರ ಮುಂದೆ ಮಾನಗೆಡಿಸುವ ಸಮಯದಲಿ ॥ ವಿಜಯಸಾರಥಿ ಅಹೋ ಪುರಂದರ ವಿಠಲಾ ಯೆಂತೆಂದು ಕೂಗಿದಾಕ್ಷಣದಲ್ಲಿ । ಅಂಜಬೇಡೆಂದು ಅಕ್ಷಯ ವೆಣಿಸಿ ನೀ ಮುಂದೆ ನಿಂದು ಕಾಯಿದ ಧೊರೆಯೇ ॥ ೩ ॥ ಶ್ರೀಃ ॥

## ೯೯. ರಾಗ ಆನಂದಭೈರವಿ, ಏಕತಾಳ.

ನಿನ್ನನೇ ನಂಬಿದೆ ನೀರಜನಯನಾ । ಎನ್ನ ಪಾಲಿಸೊ ಇಂದಿರಾ ರಮಣ ॥ ಪಲ್ಲ ॥ ಗೌತಮಮುನಿಯ ಶಾಪದಲಿ ಅಹಲ್ಯೆಯು । ಪಥ ದೊಳು ಶಿಲೆಯಾಗಿ ಮಲಗಿರಲು ॥ ಪತಿತಪಾವನ ನಿನ್ನ ಪಾದ ಸೋಕೆ ಸತಿಯಾಗೆ। ಅತಿಶಯದಿ ಭಕುತರನ ಕಾಯುವನೆಂಬೋದು ಕೇಳಿ॥ ೧ ॥ ಬಲವಂತ ಉತ್ತಾನಪಾದರಾಯನಣುಗನ । ಮಲತಾಯಿ ನೂಕಲಡವಿ ಯೊಳಗೆ ॥ ಜಲಜಾಕ್ಷ ನಿನ್ನನು ಕುರಿತು ತಪವಿ । ರಲಾಗೆ ನೀನವಗೆ ಧ್ರುವಪಟ್ಟಕಟ್ಟಿದ್ದು ಕೇಳಿ ॥ ೨ ॥ ಸುರನರಲೋಕದಿ ಪುಣ್ಯದ ಜನರನ್ನು । ಪೊರೆಯಬೇಕೆಂದು ವೈಕುಂಠದಿಂದ ॥ ಶಿರಿಸಹಿತದಿ ಬಂದು ಶೇಷಾಚ ಲದಿ ನಿಂದು । ಕರುಣೀ ಶ್ರೀಪುರಂದರವಿಠಲನೆಂಬದು ಕೇಳಿ ॥ ೩ ॥

## ೧೦೦. ರಾಗ ಸೌರಾಷ್ಟ್ರ, ಛಾಪುತಾಳ.

ನಿಲ್ಲೊ ನಿಲ್ಲೊ ಮೋಹನಾಂಗಾ ನಿಂತೆವಲ್ಲವೋ ನಿನ್ನ ಸಂಗ ॥ ಪಲ್ಲ ॥ ವಲ್ಲೆವೊ ನಾ ನಿನ್ನ ಅಂಗ ಬಣ್ಣಗಾರ ಶ್ರೀರಂಗಾ ॥ ಅನುಪಲ್ಲ ॥ ಚರಣ

ಸೇವೆಗೆ ದಯವಮಾಡೊ ಚೆನ್ನಾಗಿ ಮಾತನಾಡೊ । ಕರುಣಕಟಾಕ್ಷದಿ ನೋಡೊ ಕಸ್ತೂರಿರಂಗ ನೀ ಕೂಡೋ ॥ ೧ ॥ ಗಂಧ ಕಸ್ತೂರಿ ಗೀರು ನಾಮ ಘಂಘಮಿಸುವ ರಂಗಧಾಮಾ । ಚಂದ್ರಪೂರ್ಣವದನ ಕಾಮಾ ಚೆಲ್ಯಾಡುವ ನಿಸ್ಸೀಮಾ ॥ ೨ ॥ ಮಧುವೆಂಬೊ ಮಲ್ಲನ ಗೆದ್ದು ಮಾವ ಕಂಸನ ಅಳಿದೆಂದು । ಚದುರೆ ಗೋಪಿಯರ ಕೂಡೆಂದು ಸಂಕರ್ಷಣ ನೀನೆಂದು ॥ ೩ ॥ ಮಾನಿನಿಯೇರೆಲ್ಲರು ಕೂಡಿ ಮಾನ ಬಿಟ್ಟೇವು ನಿನ್ನನು ಬೇಡಿ । ಮನೆಯ ಮರದು ಬಂದೇವು ಓಡಿ ಮನ್ನಿಸೆಮ್ಮನು ದಯ ಮಾಡಿ ॥ ೪ ॥ ನಿನ್ನನ್ನೇ ನಂಬಿದ್ದೇವಲ್ಲ ನೀನಲ್ಲದೆ ಅನ್ಯತ್ರವಿಲ್ಲ । ಮನ್ನಿಸೊ ಪ್ರಾಣವತ್ಸಲ್ಲ ಶ್ರೀಪುರಂದರವಿಠಲ್ಲ ॥ ೫ ॥ ಶ್ರೀ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

### ೧೦೧. ರಾಗ ನೀಲಾಂಬರಿ, ರೂಪಕತಾಳ.

ನೆಚ್ಚಬೇಡ ನೀ ನೆಚ್ಚಬೇಡ ॥ ಪಲ್ಲ ॥ ನೆಚ್ಚಬೇಡ ಕುಲಧರ್ಮ ಬಿಟ್ಟು ನಡಿಯಬೇಡ ॥ ಅನುಪಲ್ಲ ॥ ದೇಹಿಯೆಂದವರೆ ನಾಸ್ತಿಯೆನ್ನಬೇಡ ಈ । ದೇಹ ಸ್ಥಿರವೆಂದು ನಂಬಬೇಡ ॥ ದೀನತನವಲ್ಲಿ ದ್ರವ್ಯ ಗಳಿಸಬೇಡ । ದೀನನಾಥನ ನೀ ಮರೆಯಬೇಡ ॥ ೧ ॥ ಹಿರಿಯರಿಲ್ಲದ ಮನೆಗೆ ಹೋಗ ಬೇಡ । ಉಂಡತನವು ನೀ ಮಾಡಬೇಡ ॥ ಪರಿಪರಿಯ ನಿಂದೆ ನೀ ಮಾಡ ಬೇಡ । ಪರಮಾತ್ಮನ ನೀ ಮರೆಯಬೇಡ ॥ ೨ ॥ ನೆಂಟರಿಲ್ಲದ ನಾಡಿಗೆ ನೀ ಹೋಗಬೇಡ । ಉಂಟೆಂದು ಒಬ್ಬರ ಕೂಡ ಹೇಳಬೇಡ ॥ ಕಂಟಕ ನಾಗಿ ನೀ ತಿರುಗಬೇಡ ನರ । ಕಂಠೀರವನ ನೀ ಮರೆಯಬೇಡ ॥ ೩ ॥ ಅಂತರಂಗದ ಮಾತು ಆಗಲಿ ಕೆಡಬೇಡ । ಪಂಕ್ತಿಯೊಳು ಪರಭೇದ ಮಾ ಡಬೇಡ ॥ ನಿನ್ನಂಗವನೆ ನೋಡಿ ಹಿಗ್ಗಬೇಡ । ಜಗದಂತರ್ಯಾಮಿಯ ನೀ ಮರೆಯಬೇಡ ॥ ೪ ॥ ತಂದೆತಾಯಿಗೆ ಕೇಡು ನೀ ನೆನೆಯಬೇಡ । ಎಂದಿಗೆ ಹುಸಿಮಾತನಾಡಬೇಡ ॥ ಸಂದೇಹ ಬೇಡ ಸರ್ವೋತ್ತಮನಾದ । ತಂದೆ ಶ್ರೀಪುರಂದರವಿಠಲನ ಮರೆಯಬೇಡ ॥ ೫ ॥ ಶ್ರೀ ॥

## ೧೦೨. ರಾಗ ಖಮಾಸು, ಆದಿತಾಳ.

ನೋಡಬಾರದು ಎಂದೆಂದಿಗೆ ನೋಡಬಾರದು । ಈ ಮೂರ್ಖನ್ನ ಈ ಘಾತಕನ ಈ ಪಾಪಿಯ ॥ ಪಲ್ಲ ॥ ನೋಡಿದರೆ ಸೂರ್ಯನ್ನ ನೋಡಿ ಪರಮಾತ್ಮನ ಸ್ಮರಿಸಬೇಕು ॥ ಅನುಪಲ್ಲ ॥ ಅಶ್ರದ್ಧೆಯಿಂದ ಹರಿಚಿಹ್ನೆ ಇಲ್ಲದವರ । ವಿಶ್ವಾಸಘಾತಕ ವೇಷಧಾರಿಯರ ॥ ಪಶ್ವಾದಿವರ್ತನ ಉದ್ಯೋಗಬ್ರಹ್ಮ ಜೀವರೈಕ್ಯವೆಂಬರ । ಶಾಸ್ತ್ರ ಏಕಪ್ರಕಾರ ನಾ ಶಕ್ತನೆಂದು ತಿಳಿವವರ ॥ ೧ ॥ ತುಲಸಿಯಿಲ್ಲದ ಮನೆ ತುಷ್ಟಿಯಿಲ್ಲದ ವಿಪ್ರ । ಜಲಜನಾಭನ ಸತತ ಸ್ಮರಿಸದವರ ॥ ಸಲೆ ನಿಜ ಸತ್ಕರ್ಮ ಇಲ್ಲದಂಥಾವರ । ಶ್ರೀಲೋಲ ಪರನೆಂದು ತಿಳಿಯದವರ ॥ ೨ ॥ ಸಾಲಿಗ್ರಾಮ ಸುದರ್ಶನ ಚಕ್ರಾಣಿಕೆ ರಹಿತವಾಗಿ । ಮೂಲಮಂತ್ರ ಪ್ರತಿಮೆ ಇಲ್ಲದ ಮೂರ್ತಿಯ ಪೂಜೆ ॥ ಸಾಲಮಾಡಿ ಅಂಜದವರ ಸಜ್ಜನರ ದೂಷಿಸುವರ । ಅಲಸದೆ ಸಿಟ್ಟು ಬಿಡದೆ ಇಹರನ್ನ ॥ ೩ ॥ ಅತ್ತೆ ಮಾವಗೆ ಸೇವೆ ಮಾಡದೆ ಪತಿಗೆ ಅಂಜದವಳ । ಉ । ನ್ಮತ್ತಸ್ತ್ರೀಯಳ ನಿಷ್ಠುರ ಮಾತನಾಡುವಳ ॥ ಉತ್ತಮ ಮಧ್ಯಮ ನೀಚವು ತಿಳಿಯದವರ । ಚಿತ್ತದಲ್ಲಿ ಕ್ರೋಧವಿಟ್ಟು ಮತ್ತು ಮಾತನಾಡುವರ ॥ ೪ ॥ ಅತ್ಯಂತಭೇದವಾದ ಶ್ರೀಮದಾನಂತರೂಪಗಳಿಗೆ । ಪ್ರತ್ಯೇಕ ಗುಣಗಳನು ಹೇಳುವ ಬ್ರಹ್ಮರನ್ನ ॥ ಸತ್ಯವೆಲ್ಲ ಮಿಥ್ಯವೆಂಬೊ ಸ್ವಾಮಿದ್ರೋಹಿಗಳ । ಸತ್ಯವಾದ ಪುರಂದರವಿಠಲನ್ನ ಸ್ಮರಿಸದವರ ॥ ೫ ॥ ಶ್ರೀ॥

## ೧೦೩. ಉದಯರಾಗ, ಆದಿತಾಳ.

ಪಂಥ ಬೇಡಿ ಪ್ರಾಣಿಗಳಿರಾ ॥ ಪಲ್ಲ ॥ ಸಂತತ ಹರಿದಾಸರಾಗಿ ಅಂತಕಪುರ ಸುಖವಿಲ್ಲ ಯಮನು ಬಹು ಹೊಲ್ಲ ॥ ಅನುಪಲ್ಲ ॥ ಕಡೆಯಝಾಮದಲೆದ್ದು ಹರಿಯ ಸ್ಮರಣೆಯ ಮಾಡಿ । ನುಡಿ ಹರಿಯ ಕೀರ್ತನೆ ಒಡನೆ ಮಾಡಿ ॥ ಕಡುಸ್ನೇಹದಲ್ಲಿ ಕರನ ಪಾವಕಮುಲದಲಿಟ್ಟು । ಬಿಡದೆ ಸೇವೆಯ ಮಾಡೊ ಚಿತ್ತವಲ್ಲಿಡೊ ॥ ೧ ॥ ಮಧ್ವಮತವನೆ ಭಜಿಸೊ ಮದನನಯ್ಯನ ಒಲಿಸೊ । ಉದ್ಧರಿಸೊ ನಿನ್ನ ಕುಲವು ಛಲವು ಬೇಡ ॥

ಸಿದ್ಧಾಂತನೆಂದೆನಿಸೊ ಸಜ್ಜನಸಂಗವ ಬಯಸೊ । ಅ । ಪದ್ಮ ಪಾತನೆ ಜರಿಸೊ ಹರಿಯ ಭಜಿಸೊ ॥ ೨ ॥ ಪ್ರೇಮದಲಿ ಘನಸುಖ ನೇಮದಲಿ ಹರಿಸಖ । ದುರ್ಮತಗಳ ಬಿಟ್ಟು ದುಷ್ಟರ ಸಂಗ ಅಟ್ಟು ॥ ಅಮರಪತಿ ಗಣಪ್ರಿಯ ಪುರಂದರವಿಠಲನ್ನ । ಕ್ರಮದಿಂದ ಮರೆಹೊಕ್ಕು ನಂಬಿ ಸುಖವಕ್ಕೊ ॥ ೩ ॥ ಶ್ರೀ ॥

## ೧೦೪. ರಾಗ ಮೋಹನ, ಅಟತಾಳ.

ಬಾರಮ್ಮ ನಾವಿಬ್ಬರಾಡುವ ಮುಕ್ತಿಸಾಧನಂಗಳು ಬೇಗ ಬೇಡುವ ॥ ॥ ಪಲ್ಲ ॥ ಕಾಡುವ ಕಪಿಶಯನಂಗಳು ಬೇಡುವ ಜ್ಞಾನಮಂಟಪದಲ್ಲಿ ಜೋಡಿ ಕೂಡ್ಯಾಡುವ ॥ ಅನುಪಲ್ಲ ॥ ಮೂರು ಮನೆಯ ಭೇದವು ಮಾಡಿ ಮತ್ತೈದೆಂಟು ಮನೆ ಕಟ್ಯಾಡುವ ॥ ೧ ॥ ಪುಂಡರೀಕಾಕ್ಷ ಶೇಷನ ಮೇಲೆ ಭೂಮಂಡಲದೊಳಗೆ ಬ್ರಹ್ಮಾಂಡವು ॥ ೨ ॥ ಶಂಖಚಕ್ರಾಂಕಿತ ಪುರಂದರವಿಠಲನ್ನ ಜ್ಞಾನಮಂಟಪದಲ್ಲಿ ॥ ೩ ॥ ಶ್ರೀ ।

## ೧೦೫. ರಾಗ ಪಂತುವರಾಳಿ, ಛಾಪುತಾಳ.

ಬಾರಯ್ಯ ಮನೆಗೆ ರಂಗಯ್ಯ ನೀನು ॥ ಪಲ್ಲ ॥ ಬಾರಯ್ಯ ನಮ್ಮ ಮನೆಗೆ ಬಾಲಗೋಪಾಲ । ಜಾರಚೋರ ಕೃಷ್ಣ ಜಾನಕಿಪತಿ ರಾಮಾ । ॥ ಅನುಪಲ್ಲ ॥ ನಂದನಂದನ ನವನೀತಚೋರ ಕೃಷ್ಣಾ । ಮಂದರೋದ್ಧರನೆ ಮಾಧವರಾಯ ರಾಮಾ ॥ ೧ ॥ ಗೋಕುಲದೊಳಗೆ ಗೋಪಿಯರ ಕೂಡಿ । ಲೋಕನೋಡಲವರ ಕಾಕುಮಾಡಿ ॥ ೨ ॥ ಹಳ್ಳಿಪಳ್ಳಿಗಳೊಳು ಎಲ್ಲ ಮೊಸರು ಹಾಲು ಬೆಣ್ಣೆ । ಕೊಳ್ಳೆಯಾಡಿ ಗೋಪಿಕುಚ ಪಿಡಿವ ಕೃಷ್ಣಾ ॥ ೩ ॥ ಅನಂತ ಪದುಮನಾಭಾ ಅಪ್ರಮೇಯ ಹೃಷೀಕೇಶಾ । ದಾನವಾಂತಕ ರಂಗಾ ದಶರಥಪುತ್ರ ರಾಮಾ ॥ ೪ ॥ ಪರಮಪವಿತ್ರ ರಾಮ ಭದ್ರಾಚಲಾಧೀಶಾ । ವರದ ಶ್ರೀಪುರಂದರವಿಠಲ ರಾಮಾ ॥ ೫ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೨೬. ರಾಗ ಕಾಂಬೋಧಿ, ಝಂಪೆತಾಳ.

ಮಧ್ವರಾಯರ ದೇವತಾರ್ಚನೆಯಾ ॥ ಪಲ್ಲ ॥ ಪ್ರಸಿದ್ಧ ರಘುನಾಥರು ಪೂಜಿಸುವ ಸೊಬಗುವಿನ ॥ ಅನುಪಲ್ಲ ॥ ಮೂಲ ರಘುಪತಿ ಒಂದು ಮುದ್ದು ಜಾನಕಿ ಒಂದು । ಲೀಲೆ ದಿಗ್ವಿಜಯ ರಾಮಮೂರ್ತಿ ಒಂದು ॥ ಸಾಲಿಗ್ರಾಮ ಹಯಗ್ರೀವ ಮೊದಲಾದವು ನಾಲ್ಕು । ಚಲುವ ಸುದರ್ಶನಗಳೆರಡು ಚಕ್ರಾಂಕಿತಗಳೈದು ॥ ೧ ॥ ಅಭಿಷೇಕಶಂಖ ಒಂದು ಅಕ್ಷಯ ಪಾತ್ರೆಯು ಒಂದು । ಶುಭನಿಧಿಯ ಬಲಮುಡಿಶಂಖ ಒಂದು ॥ ಉಭಯ ಪಕ್ಷಮಥೇನ ಒಂದು ಉತ್ತಮವಾದ ಮುದ್ರೆ ಒಂದು । ಚಕ್ರಾಂಕಿತಗಳೆರಡು ಬಾಣವೆರಡು ॥ ೨ ॥ ವೇದವ್ಯಾಸಮೂರ್ತಿ ನಾಲ್ಕು ಕ್ಷೀರದಿ ಓಲ್ಯಾಡುವ ಕೂರ್ಮ ಒಂದು । ಸ್ಮರಿಸಿ ಇಪ್ಪತ್ತೆಂಟು ಮೂರುತಿಗಳನು ॥ ಪುರಂದರವಿಠಲನ್ನ ಪೂರ್ಣಭಕ್ತರೆಂಬ । ಈ ರಘುನಾಥ ತೀರ್ಥರು ಎಷ್ಟು ಪುಣ್ಯವಂತರೋ ॥ ೩ ॥ ಶ್ರೀಃ ॥

## ೧೨೭. ಉದಯರಾಗ, ಝಂಪೆತಾಳ.

ಮರೆಯದಿರು ಶ್ರೀಹರಿಯಾ ॥ ಪಲ್ಲ ॥ ಮರೆಯದಿರು ಶ್ರೀಹರಿಯ ಮರಣಾತುರದಿ ಮಗನ ಕರದವಗೆ ಸಾಲೋಕ್ಯವಿತ್ತ ನಾರಾಯಣನ । ಸ್ಮರಣೆಯನು ಮಾಡುವರ ಚರಣಸೇವಕರಿಗೆ ನೆರೆ ಸಾಯುಜ್ಯಪದವೀವನಯ್ಯ ಅಯ್ಯಾ ॥ ಅನುಪಲ್ಲ ॥ ದೇವಕಿಯ ಬಂಧನವ ಪರಿಹರಿಸಿದವನ ಪೂತನಿಯ ಜೀವವ ಮಡುಹಿದವನ ಮಾವನ ಕೊಂದವನ । ಪಾವನಿ ತರಂಗಿಣಿಯ ಪದನಖದಿ ಪಡೆದವನ ಗೋವರ್ಧನೋದ್ಧಾರನ॥ ದಾವಾನಲವ ಪಿಡಿದು ನುಂಗಿದವನ ಲೀಲೆಯಿಂ ಗೋವತ್ಸರೂಪನಾಗಿ ಸನಕಾದಿ । ದೇವಮುನಿಮುಖರಾರಾಧಿಪನ ಚರಣರಾಜೀವವಂ ಭಜಿಸು ಕಂಡ್ಯಾ ಮನವೆ ॥ ೧ ॥ ಕಂಜಸಂಭವಪಿತನ ಕರುಣಾಪಯೋನಿಧಿಯ ಕುಂಜರನ ನುಡಿ ಕೇಳಿ ಒದಗಿ ರಣದೊಳ್ಛ । ನಂಜಯ ಜೀವವಂ ಕೃಪೆಯಿಂದ ಕಾಯಿದವನ ಅಂಜನೇಯನಾಳ್ದವನ ॥ ರಂಜಿಸುವ ಕೌಸ್ತುಭಭೂಷಣನ ನಂಜಿನೊಡೆಯನ ಮೇಲೆ ಮಲಗಿ ತಮದೊಳ್ಪ ।

ರಂಜೋತಿಮಯನಾಗಿ ಬೆಳಗುವನ ಚರಣಕಂಜವಂ ಭಜಿಸು ಕಂಡ್ಯಾ ಮನವೆ ॥ ೨ ॥ ವಾರಿಧಿಯೊಳಾಡ್ದವನ ವರಗಿರಿಯ ತಾಳ್ದವನ ಧಾರುಣಿಯ ತಂದವನ ದೈತ್ಯನ ಕೊಂದವನ । ಮೂರಡಿಯನಳದವನ ಮೊರೆಗೊಡಲೆಯ ಕಳದವನ ವಾರಿಧಿಯ ಬಂಧಿಸಿದ ॥ ದ್ವಾರಕಿಯನಾಳ್ದವನ ಪುರಮೂರು ಜಿಗಿಳಿದವನ ಚಾರು ಹಯವೇರಿದನ । ಸರಯೂತೀರದ ರಾಮ ಪುರಂದರವಿಠಲನ ಚರಣವಂ ಭಜಿಸು ಕಂಡ್ಯಾ ಮನವೆ ॥ ೩ ॥ ಶ್ರೀ ॥

## ೧೦೮. ರಾಗ ಯದುಕುಲಕಾಂಬೋಧಿ, ಆದಿತಾಳ.

ಮೆಚ್ಚನಯ್ಯ ಹರಿ ಒಪ್ಪನಯ್ಯ ॥ ಪಲ್ಲ ॥ ರಚ್ಚೆಮುಚ್ಚೆ ಮಾಡಿ ಹರಿಯ ಮೆಚ್ಚಿಸುವೆನೆಂದರೆ ॥ ಅನುಪಲ್ಲ ॥ ಊರೆಲ್ಲರು ಅರಿವರಂತೆ ಅರುಣೋದಯದಲ್ಲಿ ಎದ್ದು । ನೀರೊಳಗಿನ ಕಪ್ಪೆಯಂತೆ ಮುಳುಗಿ ಮುಳುಗಿ ಏಳುವವರ ॥ ೧ ॥ ಚರ್ಮವ ತೊಳದಿಟ್ಟು ಗೋಪಿಚಂದನ ರೇಖೆಯ ಬರದು । ಹೆಮ್ಮೆವೇಷದಿಂದ ಕುಣಿದು ಡಂಭಕತನದವರ ॥ ೨ ॥ ಪಟ್ಟೆಯಮಡಿಯನುಟ್ಟುಕೊಂಡು ಪಟ್ಟಿಗೆ ಹರಿವಿಟ್ಟುಕೊಂಡು । ಕೊಟ್ಟೆಎತ್ತಿನ ಘಂಟೆಯಂತೆ ನುಡಿವುತಿಹರ ಮಂತ್ರವನ್ನು ॥ ೩ ॥ ಮನವನೊಂದು ಕಡೆಯಲಿಟ್ಟು ತನುವಾನಡ್ಡ ಕೆಡಹಿಕೊಂಡು । ಮರದ ಮೇಲಿನ ಕೋತಿಯಂತೆ ಮಾಡುವ ನಮಸ್ಕಾರವನ್ನು ॥ ೪ ॥ ದೇವಾರಾಧನೆಯೆಂದು ಬ್ರಾಹ್ಮರುಂಡು ದಣಿಯಲಿಲ್ಲ । ನರಿನಾಯಿ ಕರದು ತಂದು ನಾಯಿಬಾಯಿ ತೊಳಿವರ ॥ ೫ ॥ ಹರಟೆಗಾಗಿ ಹರಿಸಿಕೊಂಡು ತಿರುಪತಿಯಾತ್ರೆಗೆ ತೆರಳಿ । ಮುಡುಪು ಕಟ್ಟಿಕೊಂಡು ಹೋಗಿ ಬಿಡದಿ ಹಾಕಿ ಮಿಡುಕುವರ ॥ ೬ ॥ ಮನವನೊಂದು ಕಡೆಯಲಿಟ್ಟು ತನುವನಡ್ಡ ಕಡಿಕೊಂಡು । ಪುರಂದರವಿಠಲನ್ನ ಒಲಿದು ಪೂಜೆಯ ಮಾಡುವರ ॥ ೭ ॥

## ೧೦೯. ರಾಗ ಸೌರಾಷ್ಟ್ರ, ಅಟತಾಳ.

ರಾಮ ಗೋವಿಂದಾ ಸೀತಾರಾಮ ಗೋವಿಂದಾ ॥ ಪಲ್ಲ ॥ ತೃಪ್ತಿ ಹೌದೆ ಹೆತ್ತ ತಾಯಿ ಇಕ್ಕದನಕ । ಭಕ್ತಿ ಹೌದೆ ಭಕ್ತಜನರ ಸಲಹ

ದನಕ ॥ ಮುಕ್ತಿ ಹೌದೆ ಭಾವಶುದ್ಧಿ ಇಲ್ಲದನಕ । ಚಿತ್ತಶುದ್ಧಿ ಆತ್ಮ ನಿಜವು ತಿಳಿಯದನಕ ॥ ೧ ॥ ಓದಲೇತಕೊ ಮನದಿ ವಿಜ್ಞಾನವಿಲ್ಲದನಕ । ಭೇದವ್ಯಾತಕೊ ಗತಿಯು ಗಮನ ತಿಳಿಯದನಕ ॥ ಕದನವ್ಯಾತಕೊ ಭುಜದಿ ಶಕ್ತಿ ಇಲ್ಲದನಕ । ವಾದವ್ಯಾತಕೊ ಶ್ರುತಿಯು ಶಾಸ್ತ್ರ ತಿಳಿಯದನಕ ॥ ೨ ॥ ನಳಿನವಿದ್ದರೇನು ತುಂಬಿ ಪೊದಗದನಕ । ದಳವಿದ್ದರೇನು ಧೈರ್ಯ ಕೂಡದನಕ ॥ ಲಲನೆ ಇದ್ದರೇನು ಪುತ್ರರಿಲ್ಲದನಕ ॥ ಚಲುವನಾದರೇನು ವಿದ್ಯ ಕಲಿಯದನಕ ॥ ೩ ॥ ವನವಿದ್ಯಾತಕೊ ಶುಕ ಕೋಕಿಲ ಇಲ್ಲದನಕ । ತನುವಿದ್ಯಾತಕೊ ಪರರ ಹಿತಕೆ ಬಾರದನಕ ॥ ಮನೆ ಇದ್ಯಾತಕೊ ಅತಿಥಿ ಬಂದಾರಿಲ್ಲದನಕ । ಧನವಿದ್ಯಾತಕೊ ದಾನಧರ್ಮಕ್ಕೊದಗದನಕ ॥ ೪ ॥ ಹರಿಯ ಚಿಂತೆ ಇರಲು ಅನ್ಯ ಚಿಂತೆ ಯಾತಕೊ । ಹರಿಯ ಧ್ಯಾನವಿರಲು ಅನ್ಯ ಧ್ಯಾನವ್ಯಾತಕೊ ॥ ಹರಿಯ ಒಲಿದ ಮನುಜನಿಗೆ ದೈನ್ಯವ್ಯಾತಕೊ । ಶಿರಿ ವರದ ಪುರಂದರವಿಠಲನಿರಲು ಭಯವು ಯಾತಕೊ ॥ ೫ ॥ ಶ್ರೀ ॥

## ೧೧೦. ರಾಗ ಶಂಕರಾಭರಣ, ಅಟತಾಳ.

ಲೊಡಕ ಲೊಡಕ ಜಿಂಹ್ವಾರ ಕೆಟ್ಟ ಸಂಸಾರವು ನೋಡಮ್ಮಮ್ಮ ॥ ॥ ಪಲ್ಲ ॥ ಲೊಡಕ ಸಂಸಾರವು ನಮ್ಮೆಲ್ಲರ ಗತಿಹಿತ ಮಾಡುವ ಲೊಡಲೊಟ್ಟೆಮ್ಮ ॥ ಅನುಪಲ್ಲ ॥ ವಾರೆಮುಂಡಾಸು ಗೀರುಗಂಧ ಶಿರಿವೊರೆಯು ಲೊಡಕ ಲೊಡಲೊಟ್ಟೆಮ್ಮ । ಘೋರ ಯಮದೂತರು ಗರ್ಜಿಸಿ ಎಳೆವಾಗ ಯಾರು ಬಿಡಿಸುವರಿಲ್ಲಮ್ಮಮ್ಮ ॥ ೧ ॥ ಹೆಂಡರು ಮಕ್ಕಳು ತಂದೆ ತಾಯಿಗಳು ಹಿತಮಾಡುವ ಲೊಡಲೊಟ್ಟೆಮ್ಮ । ಕಾಡೆಮದೂತರು ಕಂಡು ಕಂಡು ಎಳೆವಾಗ ಕಂಡು ಬಿಡಿಸುವರ್ಯಾರಿಲ್ಲಮ್ಮಮ್ಮ ॥ ೨ ॥ ನಿತ್ಯ ಸದಾಚಾರಂಗಳು ನಿಷ್ಠೆಯು ಗತಿಹಿತ ಮಾಡಲು ಲೊಡಲೊಟ್ಟೆಮ್ಮ । ಭಕ್ತಿ ಒಂದಲ್ಲದೆ ಪುರಂದರವಿಠಳನ ಮತ್ತೆಲ್ಲವು ಬರೀ ಲೊಡಲೊಟ್ಟೆಮ್ಮ ॥ ೩ ॥ ಶ್ರೀ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೧೧. ರಾಗ ಶಂಕರಾಭರಣ, ಝಂಪುತಾಳ.

ಸ್ಮರಿಸೊ ಸರ್ವದಾ ಹರಿಯಾ ॥ ಪಲ್ಲ ॥ ಸುರವರಧೊರೆಯು ಕರುಣಾ ಸಿಧಿಯಾ ॥ ಅನುಪಲ್ಲ ॥ ಮುನಿಜನವಂದ್ಯನ ಮನಸಿಜನಯ್ಯನ । ಮನದಲಿ ಅನುದಿನ ನೆನೆಯೊ ಹರಿಯಾ ॥ ೧ ॥ ನಂದನ ಕಂದನ ಇಂದಿರೆ ಅರಸನ । ಮಂದರೋದ್ಧರನ ಚಂದದಿಂದಲಿ ಹರಿಯಾ ॥ ೨ ॥ ವರಗುಣಪೂರ್ಣನ ಸರಸಿಜನೇತ್ರನ । ಪರವಾಸುದೇವನ ಪ್ರಾಣದ ಪ್ರಿಯನಾ ॥ ೩ ॥ ಕಂಜದಳೇಕ್ಷಣ ಮಂಜುಳಹಾರನ । ಅರ್ಜುನಸಾರಥಿ ಸಜ್ಜನಪ್ರಿಯನ ॥ ೪ ॥ ವೆಂಕಟರಮಣನ ಸಂಕಟಹರಣನ । ಲಕ್ಷ್ಮೀ ರಮಣನ ಪುರಂದರವಿಠಲನ ॥ ೫ ॥ ಶ್ರೀ ।

## ೧೧೨. ರಾಗ ಆನಂದಭೈರವಿ, ಆದಿತಾಳ.

ಸಾಕು ಸಂಸಾರ ನಮಗಿನ್ಯಾತರ ಒಗತನ ॥ ಪಲ್ಲ ॥ ಲೋಕದೊಳಗೆ ಎನ್ನ ಬೇಕೆಂಬುವರಿಲ್ಲವಿ । ವೇಕಿ ಪುರುಷ ಪರವಶನಾದರೆ ಯಾತರ ಸಂಸಾರ ॥ ಅನುಪಲ್ಲ ॥ ಕಾಮವೆಂಬೊ ನಗಿಹೆಣ್ಣು ಎನ್ನ ಕಟ್ಟಿ ಆಳು ತಾಳೆ । ಕ್ರೋಧವೆಂಬೊ ಸವತಿ ಕೊಲ್ಲುತಾಳೆ ಯಾತರ ಒಗತನ ॥ ೧ ॥ ಮದವೆಂಬೊ ಮೈದುನ ಎನ್ನ ವಡನೆ ನಗುತಾನೆ । ಮತ್ಸರವೆಂಬೊ ಭಾವ ಎನ್ನ ತುಚ್ಛವು ಮಾಡುತಾನೆ ಯಾತರ ಒಗತನ ॥ ೨ ॥ ಮೋಹ ವೆಂಬೊ ಅತ್ತಿಗೆ ಎನ್ನ ಕೊಂಡು ಮುಣುಗುತಾಳೆ । ಲೋಭವೆಂಬೊ ನಾದಿನಿ ಒರಸುತಾಳೆ ಯಾತರ ಒಗತನ ॥ ೩ ॥ ಅಜ್ಞಾನವೆಂಬೊ ಅತ್ತೆ ಎನ್ನ ಅಟ್ಟಿ ಬಡಿತಾಳೆ । ಸುಜ್ಞಾನಿ ಮಾವ ಕುರುಡನಾದರೆ ಯಾತರ ಒಗತನ ॥ ೪ ॥ ತಾಪತ್ರಯದಲ್ಲಿ ನಾನು ತೇಲಿ ಮುಣುಗುತೇನೆ । ಆಪತ್ತು ಪರಿಹರಿಸುವ ಪುರಂದರವಿಠಲ ಯಾತರ ಒಗತನ ॥ ೫ ॥

## ೧೧೩. ರಾಗ ಶಂಕರಾಭರಣ, ಝಂಪುತಾಳ.

ಹಣ್ಣಿನಂತೆ ಲಕ್ಷಣ ಇರಬೇಕು । ಬಾಳೇ । ಹಣ್ಣಿನ ರುಚಿಯಂತೆ ಗುಣ ವಿರಬೇಕು ॥ ಪಲ್ಲ ॥ ಒಡಲನೆ ಕಟ್ಟಿ ಒಬ್ಬರಿಗಿಡಬೇಕು । ಸುಡುಗಾಡಿಗಳ

ಮಾತು ನೀ ಮರೆಯಲುಬೇಕು ॥ ನೋಡಿದರೆ ನೋಡಲಿಲ್ಲೆಂಬೋದಿರಬೇಕು । ನಡತೆ ಗುಣದಲಿ ಪಾರ್ವತಿ ಸಮವಿರಬೇಕು ॥ ೧ ॥ ಗತಿಯು ತನಗೆ ಪ್ರಾಣಪತಿ ಎನಬೇಕು । ಪ್ರತಿ ಅರುಂಧತಿ ಈಕೆ ಯೆನಿಸಬೇಕು ॥ ಯತಿ ಗುರುಹಿರಿಯರಿಗೆರಗಿ ಸುಖಿಸಬೇಕು । ಅತಿಶಯ ಸಮುದ್ರ ಗಾಂಭೀರ್ಯವಿರಬೇಕು ॥ ೨ ॥ ಪರತತ್ವಭಾವವ ತಿಳಿದಿರಬೇಕು । ಹರಿ ಪರದೇವತೆಯಧೀನ ಇರಬೇಕು ॥ ವರಲಕ್ಷ್ಮೀಯಂದದಿ ದಯವಿರಬೇಕು । ಪುರಂದರವಿಠಲ ಮೆಚ್ಚಬೇಕು ॥ ೩ ॥ ಶ್ರೀ ॥

## ೧೧೪. ರಾಗ ಶಂಕರಾಭರಣ, ಆದಿತಾಳ.

ಹರಿನಾರಾಯಣ ಹರಿನಾರಾಯಣ ಹರಿನಾರಾಯಣ ಎನು ಮನವೇ ॥ ॥ ಪಲ್ಲ ॥ ಮರಿತಶರಧಿಯನುತ್ತರಿಸಬೇಕಾದರೆ ಶಿರಿಯರಸನ ಸ್ಮರಿಸೊಲ್ಲ ॥ ಅನುಪಲ್ಲ ॥ ಘೋರ ತರದ ಸಂಸಾರವು ದುಃಖದ ವಾರಿಧಿ ಇದರೊಳಗೇನುಂಟು । ಮೂರುದಿನದ ಬಾಳಿಕೆ ಇದರೊಳಗಾರ್ಕೈಸು ವದ್ಯಾತರ ನಂಟು ॥ ತೋರುವ ಸಿರಿಸಂಪತ್ತಿನ ನೆಲೆಯು ವಿಚಾರಿಸಲಿದು ಕನಸಿನ ಗಂಟು । ಮಾರರಮಣನ ಮನಮುಟ್ಟಿ ಭಜಿಸಿದರೆ ಕಾರಣ ಮುಕುತಿಗೆ ಕಡೆವುಂಟು ॥ ೧ ॥ ಲೆತ್ತ ಪಗಡೆ ಚತುರಂಗ ಜೂಜಾಟದಿ ಹೊತ್ತು ಕಳೆವದ್ಯಾತಕೆ ನೀನು । ಸುತ್ತಿ ಸುಳಿದು ಬಳಲುತ್ತ ಮಾಡಿದ ಗೃಹಕೃತ್ಯದಿ ನಿನಗಿಹ ಫಲವೇನು ॥ ಅತ್ಯಾತುರದಿಂದ ಗಳಿಸಿದ ಆರ್ಜನೆ ಹತ್ತಿ ಸಂಗಡ ಬರುವದೇನು (ಕತ್ತಲೆಯೊಳು ಕಣ್ಣಾನು ತೆರವಂದದಿ ವ್ಯರ್ಥದಿ ಸಂಗ್ರಹಿಸುವದೇನು) । ಮೃತ್ಯುಭಯವ ನೀ ಜಯಿಸಬೇಕಾದರೆ ಪುರುಷೋತ್ತಮಗೆ ಶರಣೆನ್ನು ॥ ೨ ॥ ಕೂಳಿನ ಬಲದಲಿ ಬೆಳದೀ ಕಾಯವಿದು ಬಾಳುವೆಯೆಂಬದು ಸ್ಥಿರವಲ್ಲ । ಮಾಳಿಗೆ ಮನೆ ಉಪ್ಪರಿಗೆ ಕೋಣೆಯು ನಾಳಿಗೆ ಅಲ್ಲಿಗೆ ಬರೋದ್ಲಿಲ್ಲ ॥ ಜಾಳಿಗೆ ತುಂಬಿದ ಹೊನ್ನಾಭರಣವು ನಾಳೆಗೆ ಸಂಗಡ ಬಾಹೊದಲ್ಲ । ಕಾಲನ ಭಯವನು ಕಳೆಯಬೇಕಾದರೆ ನಾಲಿಗೆಯಲಿ ಸ್ಮರಿಸಿರಿ ಸೊಲ್ಲ ॥ ೩ ॥ ಮಡದಿ ಮಕ್ಕಳು ಮಮಕಾರದಲ್ಲಿ ಮನವಿಡುತಲಿ ನೀನಿರಬೇಡ । ಬಿಡ

ಸಾರದ ಮಾಯಾಪಾಶಕೆ ಸಿಲುಕಿ ಕಡುಲೋಭಿಯಾಗಿ ನೀ ಕೆಡಬೇಡ। ತಡೆಯದೆ ಯಮನ ದೂತರು ಬಂದು ಎಳೆವಾಗ ಅವರಲಿ ಸಿಗಬೇಡ। ಕಡಲಶಯನನ ಭಜಿಸಲು ಮುಕ್ತಿಯ ಪಡೆಯಬಹುದು ನುತಿಸೊ ಗಾಢ ॥ ೪ ॥ ಕುಮತಿಗಳರಿಷಡ್ವರ್ಗ ಪರಾಕ್ರಮ ಗತಿಗಳನೆಲ್ಲವ ನೀ ಕ್ಷಮಿಸೊ। ಭ್ರಮೆಗೊಳಿಸುವ ಮಾಯೇಂದ್ರಿಯಂಗಳ ನೀ ತವಕದಿಲ್ಲ ವಲೆ ನೀ ನಿಲ್ಲಿಸೊ ॥ ಯಮನಾಳ್ಗಳು ಹಿಮ್ಮೆಟ್ಟುತಲಿಹರೊ ಕ್ರಮುಕರ್ಮ ಗಳ ನಿಲ್ಲದೆ ನಡಿಸೊ ॥ ಅಮಿತಪರಾಕ್ರಮ ಪುರಂದರವಿಠಲನ ಪಾದ ಧ್ಯಾನದೋಳ್ಮನಸಿರಿಸೋ ॥ ೫ ॥ ಶ್ರೀ ।

## ೧೧೫. ರಾಗ ದೇಶಿ, ಆದಿತಾಳ.

ಹಾಹಾ ಹಾಹಾ ಮಾನವಾ ಹೀಂಗ್ಯಾಕೆ ಕೆಟ್ಟೆ ॥ ಪಲ್ಲ ॥ ಹರಿಭಜ ನೆಯ ಬಿಟ್ಟೆ ॥ ಅನುಪಲ್ಲ ॥ ಜನ್ಮಾಂತರದಲಿ ಮಾಡಿದ ಪುಣ್ಯ ಇಂದಿಗೆ ಭೂಸುರಜನ್ಮವ ಕೊಟ್ಟ ದೇವವರೇಣ್ಯ । ಸನ್ಮಾನದಿ ಮಾನ್ಯ ಮನ್ಮಥ ನಯ್ಯನ ಧನ್ಯಚರಿತ್ರನ ಒಮ್ಮ್ಯಾದರು ನೀ ಮನ್ನಿಸಲಿಲ್ಲ ಪೂಣ್ಯ ॥ ೧ ॥ ತನುವಿನ ಚಿಂತೆ ತನಯರ ಚಿಂತೆ ಧನಧಾನ್ಯದ ಚಿಂತೆ । ವಸಿತೇರ ಚಿಂತೆ ಉದರದ ಚಿಂತೆ ಅನುದಿನದಲಿ ತನುವ ನೆನಿಸುತ ಕನಗನಂತೆ ॥ ॥ ೨ ॥ ಮಡದಿ ಮಕ್ಕಳಿಗೆ ಒಡವೆಯ ಗಳಿಸಬೇಕೆಂಬೊ ಚಿಂತೆ ಮನೆ ಚಿಂತೆ । ಮಾನ್ಯದ ಚಿಂತೆ ಮನುಜರಿಗೆ ಅನುದಿನ ಪುರಂದರವಿಠಲನ ನೆನೆಯದೆ ಕನಗನಂತೆ ॥ ೩ ॥ ಶ್ರೀ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೧೬. ರಾಗ ಪುನ್ನಾಗವರಾಳಿ, ಆದಿತಾಳ.

ಹೊರಡುತಾನೆ ಚನ್ನಕೃಷ್ಣ ಸುಮ್ಮನೆ ॥ ಪಲ್ಲ ॥ ಚಿಕ್ಕ ಮಗು ಯೆಂದು ನಾವು ಮುದ್ದಾಡಹೋದರೆ । ಸೊಕ್ಕುತಲೆ ಬಂದು ಎನ್ನ ಕರ್ಕಶ ಕುಚ ಗಳ ಪಿಡಿದು ॥ ಮಕ್ಕಳ್ಹುಟ್ಟುವರೆಂದು ಘಕ್ಕನೆ ರೆಟ್ಟೆಯ ಪಿಡಿದು । ಕಕ್ಕು ಲತಿ ಮಾಡಿಪೋದ ಏನು ಮಾಡಲಿ ನಾನೇನು ಮಾಡಲಿ ॥ ೧ ॥ ಅಂಗಳ

ವೊಳಗೆ ನಾವು ಗೆಳೆಯರೆಲ್ಲರು । ಮಂಗಳಸ್ನಾನವ ಮಾಡಲು ॥ ಸಂಗಪ ರಾಯರ ಕೂಡಿ ಬೊಗರಿಯಾಡುತ ಬಂದು । ಕಂಗಳನೆಲ್ಲನು ಮುಚ್ಚಿ ಬಂಡುಮಾಡಿ ಓಡಿಪೋದ ॥ ೨ ॥ ಎಷ್ಟು ನಿನಗೆ ಹೇಳಲೊ ರಂಗಯ್ಯ ರಂಗ । ದುಷ್ಟತನಗಳು ಭಾಳವೊ ॥ ಸೃಷ್ಟಿಗೊಡೆಯನೆ ನಮ್ಮ ಪುರಂದರ ವಿಠಲನು । ದಿಟ್ಟತನದಲಿ ಬಲು ಅಟ್ಟುಳಿಯು ಮಾಡಿ ಪೋದ ॥ ೩ ॥

## ೧೧೭. ಉದಯರಾಗ, ತಾಳ.

ನೆರ ನಂಬಿರೊ ಎಲ ಅಣ್ಣಾ ॥ ಪಲ್ಲ ॥ ಸಿರಿಯರಸನ ಕರುಣಾಳುವ ಸರಸಿಜಸಂಭವನ ಪಿತನ । ಸುರರೊಡೆಯನ ಸಕಲ ವೇದ ವರಲು ಹರಿಯು ॥ ಪರದೇವತೆ ಇವೆ ಇದೆ ಯೆಂದು ಕರಕಮಲವೋಳಿಟ್ಟು ಮೆರೆವ ಪರಮಹಂಸರಾದ ವ್ಯಾಸರಾಯರ ॥ ೧ ॥ ಜ್ಞಾನ ಭಕ್ತಿ ವೈರಾಗ್ಯ ನಿಧಾನವ ನಮಗಿತ್ತು ಮೆರೆವ । ದಾನವಾರಿ ಗುಣಗಣದಲಿ ಮನಮುಳಕ್ತ ಪ್ಪನ ॥ ತಾನೆ ದೈವವೆಂಬಾಸುರ ಕಾನನಗಳ ತರಿದಟ್ಟುವ । ಆನಂದ ತೀರ್ಥರ ಪಟ್ಟದಾನೆ ವ್ಯಾಸರಾಯರ ॥ ೨ ॥ ಅಂದು ಸಾಸಿರ ಮುಖದಲಿ ನೋವದಲಿ ಮು । ಕುಂದನ ಅಹಿರಾಜ ಪೊಗಳಿದಂದದಲಿಂದು ಕೃಪೆ ಯಿಂದ ಪೊರೆವ ಅಭಿನವ ಪುರಂದರವಿಠಲನ ಜಗಕೆ । ತಂದು ತೋರಿದ ವೈಷ್ಣವ ಕುಮುದೇಂದು ವ್ಯಾಸರಾಯರ ॥ ೩ ॥ ಶ್ರೀ ॥

## ೧೧೮. ರಾಗ ಧನ್ಯಾಸಿ, ಅಟತಾಳ.

ಕಳವು ಕಲಿಸಿದೆಮ್ಮ ಗೋಪೀ ಕಮಲನಾಭಗೇ ॥ ಪಲ್ಲ ॥ ಉಳಿಸಿಕೊಂಡ್ಯ ನಿಮ್ಮ ಮನೆಯ ಪಾಲುಬೆಣ್ಣೆಯಾ ॥ ಅನುಪಲ್ಲ ॥ ಆರು ಏಳಾದ ಮುನ್ನ ಎಬ್ಬಿಸಿ ಶೃಂಗಾರ ಮಾಡಿ । ಗೀರುಗಂಧವ ಹಚ್ಚಿ ಹಾರವಾ ಹಾಕಿ ॥ ಕೇರಿ ಕೇರಿ ಪಾಲುಬೆಣ್ಣೆ ಸೂರೆಮಾಡಿ ಬಾ ಎನ್ನುತ । ವಾರಿಜನಾಭನ ಕಳುಹಿದ್ಯಮ್ಮ ವನಜನಯ್ಯನ ॥ ೧ ॥ ಚಿತ್ರಜನಯ್ಯನ ಕೈಲಿ ಚಿನ್ನದ ಚಂಡನೆ ಕೊಟ್ಟು । ಅರ್ತಿಯಿಂದ ಶೃಂಗರಿಸಿ ಆಡಿ ಬಾ ಯೆಂದು ॥ ಕತ್ತಲೆ ಬೀದಿಯು ಸುತ್ತಿ ಕಸ್ತೂರಿತಿಲಕವನಿಟ್ಟು । ನಿತ್ಯ

ನಂದಗೆ ಸಿಲುವುಗನ್ನಡಿಯ ತೋರಿ ॥ ೨ ॥ ಸಣ್ಣ ಮಲ್ಲಿಗೆಯ ಮುಡಿಸಿ ಬಣ್ಣದ ವಲ್ಲಿಯ ಹೊದಿಸಿ । ಹೆಣ್ಣುಗಳ ಒಲಿಸುವಂತೆ ಹೇಳಿ ಬುದ್ಧಿಯ ॥ ಹುಣ್ಣಿಮೆ ವಿಾಸಲಪಾಲು ಉಣ್ಣು ಮೆಲ್ಲು ಮೆಲ್ಲೆನುತ್ತ । ಚಿಣ್ಣನ ಕಳು ಹಿದ್ಯಮ್ಮ ಉಣ್ಣನಿಕ್ಕದೆ ॥ ೩ ॥ ವಾರಿಜನಾಭ ಮಾಡಿದಂಥ ದೂರು ಹೇಳಿದರೆ ನಿಮಗೆ । ಬಾಯಿಬಡುಕರೆಂದು ಗೋಪಿ ಜೈವೆ ನಮ್ಮನು ॥ ಊರು ಮಾಡಿದ ಕೊಳಗ ತಾಯಿ ಮಾಡಿದ ಹೊಟ್ಟೆ । ವಾರಿಜನಾಭನ ಕರೆದು ಗೋಪಿ ಬುದ್ಧಿಯ ಹೇಳೆ ॥ ೪ ॥ ಹೊಟ್ಟೆಬಾಕನಾದನಿವನು ಬೆಟ್ಟದೊಡೆಯಗೆ ಪ್ರಿಯ । ಇಟ್ಟುಕೊಂಡು ಈರೇಳು ಭುವನ ಉದರ ದಲ್ಲಿಯೆ ॥ ಎಷ್ಟು ಹೇಳಿದರು ಕೇಳ ಏನು ಮಾಡಲಮ್ಮ ನಾನು । ಕಟ್ಟು ಮಾಡಿಸಲುಬೇಕು ಪುರಂದರವಿಠಲಗೆ ॥ ೫ ॥ ಶ್ರೀ ॥

## ೧೧೯. ರಾಗ ರೇಗುಪ್ತಿ, ಝಂಪೆತಾಳ.

ಅಂಜಬೇಡ ಬೇಡೆಲೋ ಜೀವಾ । ಭವ । ಭಂಜನ ಹರಿ ಶರಣ ಕಾವಾ ॥ ಪಲ್ಲ ॥ ಬಂದ ಕಷ್ಟಗಳೆಲ್ಲ ತಾಳಿಕೋ । ಬಲು । ಸಂದೇಹ ಬಂದಲ್ಲಿ ಕೇಳಿಕೋ ॥ ನಿಂದಾಸ್ತುತಿಗಳ ತಾಳಿಕೋ । ಗೋ । ವಿಂದ ನಮ್ಮವನೆಂದು ಹೇಳಿಕೋ ॥ ೧ ॥ ಮಾಧವನಿಗೆ ತನು ಮನ ಮೆಚ್ಚು । ಕ್ರೋಧ । ರೂಪದ ಮಾಯೆಗಳ ಕಚ್ಚು ॥ ವೇದತೀರ್ಥರ ಪಾದವೆ ಹೆಚ್ಚು । ಮಾಯಾ । ವಾದಿಮತಕ್ಕೆ ಬೆಂಕಿಯ ಹಚ್ಚು ॥ ೨ ॥ ಪರನಾರಿಯರ ಆಶೆಯ ಬಿಡು । ನೀನು । ಪರಮಾತ್ಮನ ಧ್ಯಾನವ ಮಾಡು ॥ ಹರಿ ಸರ್ವೋತ್ತಮನೆಂದು ಕೊಂಡಾಡು । ವರದ । ಪುರಂದರವಿಠಲನ ಮೂರ್ತಿಯ ನೋಡು ॥ ೩ ॥ ಶ್ರೀ ॥

## ೧೨೦. ರಾಗ ಯದುಕುಲಕಾಂಬೋಧಿ, ತ್ರಿಪುಟತಾಳ.

ನಿನ್ನ ದಾಸನಾದೆ ನಾನು ॥ ಪಲ್ಲ ॥ ಎನ್ನ ಮನ್ನಿಸಿ ಮಮತೆಯ ಮಾಡಯ್ಯಾ ನೀನು ॥ ಅನುಪಲ್ಲ ॥ ಜನನಿಯ ಗರ್ಭದೊಳು ನಾನು । ಬಲು । ದೀನತ್ವದಿಂದ ತೊಳಲಿ ಬಂದವನು ॥ ಚಿನುಮಯಾನಂದಾತ್ಮ

ಕನು । ಪ । ನನುಮಾನವಿಲ್ಲದೆ ನಿನ್ನ ನಂಬಿದೆನು ॥ ೧ ॥ ಹಲವು ಜನ್ಮದಿ ತೊಳಲಿದೆನು । ಬಲು । ಬಳಲಿದೆ ಸಾಕೋ ಜನಿಸಲಾರೆ ನಾನು ॥ ನಳಿನಾಕ್ಷ ನಿನ್ನ ನಂಬಿದೆನು । ಎನ್ನ । ಅಳಲಿಸುವದು ಗುಣವಲ್ಲ ಇದೇನು ॥ ೨ ॥ ಮಲಮೂತ್ರ ದೇಹದೊಳ್ಬಂದು । ಬಲು । ಅಲಿಸಿದೆ ನಿನ್ನ ಕಾಣದೆ ದೇಹ ನೊಂದು ॥ ಲಲನೆಗಕ್ಷಯವಿತ್ತೆನಂದು । ನಿನ್ನ । ನಗಿನ ಕರುಣಿದ ಕಂದ ನಾನೆಂದು ॥ ೩ ॥ ಮಂದಮತಿಯೊಳಗಾನು । ಬಲು । ದಂದುರ್ಗದಲಿ ಸಿಲುಕಿ ನೊಂದೆನೊ ನಾನು ॥ ತಂದೆತಾಯೆಲ್ಲವು ನೀನು । ಹೀಗೆ । ಎಂದು ನೇಮಿಸು ಯೆನಗೊಂದು ದಾರಿಯನು ॥ ೪ ॥ ಒಂದಿನ ಜನ್ಮವ ಮರತು । ಎನ್ನ । ಅಂತರಂಗವು ಕರಗಿತು ನಿನ್ನನೆ ನುರತು ॥ ಚಿಂತೆಗಳೆಲ್ಲವು ತೊರದು । ನಿ । ಶ್ಚಿಂತನಾದೆ ನಿನ್ನ ದಾಸ ರೊಳ್ಬೆರತು ॥ ೫ ॥ ಸಾರಿ ಪೇಳುವೆ ಒಂದು ಸೊಲ್ಲ । ಇದ । ನರಿದು ತಿಳಿದುಕೊಳ್ಳಿರಿ ನೀವೆಲ್ಲ ॥ ನಾರಾಯಣನಲ್ಲದಿಲ್ಲ । ಹೀಗೆ । ಸಾರುತಿದೆ ವೇದಶಾಸ್ತ್ರಂಗಳಲೆಲ್ಲ ॥ ೬ ॥ ಮರತೆನೋ ನಿನ್ನ ನಾಮವನು । ಜಿಹ್ವೆಗೆ । ಬರೆದು ಬೋಧಿಸೋ ನಿನ್ನ ದಿವ್ಯ ನಾಮವನು ॥ ಶರಣುಪೊಕ್ಕರ ಕಾಯುವನು । ನಮ್ಮ । ವರದ ಪುರಂದರವಿಠಲ ಇದೇನು ॥ ೭ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೨೧. ರಾಗ ಕನ್ನಡಕಾಂಬೋಧಿ, ತಾಳ.

ನೋಡೆ ಗೋಪಿ ನೋಡೆ । ಗಾಡಿಗಾರ ಕೃಷ್ಣನ್ನ ಮಡುಕು । ಮಾಡುವ ಮಾಟಂಗಳೆಲ್ಲ ॥ ಪಲ್ಲ ॥ ಅಡಿಗಡಿಗೆ ಮಡದಿಯರಟ್ಟುಳಿವ । ಬಿಡದೆ ನಿಲಿಗಳ ಮೊಲಿಗಳಿಗರಡುವ ॥ ಜಡಿಜಡಿದುಡಿಯ ಮೇಲಿಹೋ ಮಕ್ಕಳ । ಕೆಡಹಿ ತೊರದ ಮೊಲೆಗಳನುಂಬುವನ ॥ ೧ ॥ ಏನೆಂದಳ ದಿರೋ ಕೃಷ್ಣಾ ಯೆಂದು । ಮಾನವ ಕೈಯಲಿ ಕೊಟ್ಟರಂಬಿಸೆ ॥ ಆನೆಯ ಕಂಡು ತಾನಳುತಿಹನು । ಮನದೊಳಾನಿಯ ಹೋಗಿಸಿ ಕೊಡೆಂಬನು ॥ ॥ ೨ ॥ ಚಿನ್ನ ನಕ್ಕಿಯ ನಿಲಬೇಕೆಂದು । ಕನ್ನಡಿ ಕೈಯಲಿ ಕೊಟ್ಟು ರಂಬಿಸೆ ॥ ತನ್ನೊಳು ತಾನೆ ಪ್ರತಿಬಲಿಸಲು । ಚಿನ್ನನ ಕರದು ಕೊಡೇ

ನೆಂಬನು ॥ ೩ ॥ ಹರಿವೋ ಹಾವು ಉರಿವಾ ಕಿಚ್ಚು । ಸೆರಗಿಲಿ ತಂದು ಕಟ್ಟಿಕೊಡೆಂಬನು ॥ ಕರುವೆಂದು ಕರಡಿಯನೇ ತಂದು । ತುರುಗಳ ಮೊಲೆಗಳನುಣಿಸಿಕೊಡೆಂಬನು ॥ ೪ ॥ ಇಂಥಾ ಲಕ್ಷ್ಮೀಕಾಂತನ ನೋಡಿ । ಕಾಂತೆಯರೆಲ್ಲರು ಕಾಡುತಲಿಪ್ಪರು ॥ ಸಂತತ ವರದಪುರಂದರ ವಿಠಲ । ಎಂತಾಡಿಸಲಂತಾಡುವ ರಂಗನಾ ॥ ೫ ॥ ಶ್ರೀ ॥

## ✓೧೨೨. ರಾಗ ಕಾಂಬೋಧಿ, ಝಂಪೆತಾಳ.

ಮೆಚ್ಚದಿರು ಈ ಭಾಗ್ಯ ಹುಚ್ಚು ಮಾನವಾ ॥ ಪಲ್ಲ ॥ ವೆಚ್ಚವಾಘೋಗುವದು ಯೇಸೊಂದು ಪರಿಯಾ ॥ ಅನುಪಲ್ಲ ॥ ಹದಿನೆಂಟು ಕೋಟಿ ಧನ ಉದಯಕಾಲಕೆ ಬರಲು । ವದಗಿದಾಗಾಗಲೇನು ಕರ್ಣಗೇ ॥ ಹದವರಿತು ಹಾಗದಾ ಕಾಸಿಲ್ಲದೇ ಕೊಟ್ಟು । ತುದಿಗೆ ಮಧ್ಯಾಹ್ನ ದಾರಿ ಪ್ರನೆನಿಸುವನು ॥ ೧ ॥ ಮುತ್ತು ಮಾಣಿಕ್ಯ ನವರತ್ನ ಚೌಕಳಿಗಳು । ಎತ್ತ ನೋಡಿದರು ಶಿರಿ ವೋಯೆಂಬಳು ॥ ಸತ್ಯ ಹರಿಶ್ಚಂದ್ರನು ಮತ್ತೆ ಸುಡುಗಾಡಿನಲಿ । ಎತ್ತಲಿಲ್ಲವೆ ಹೆಣಕೆ ಹಾಗದಾ ಕಾಸಾ ॥ ೨ ॥ ಬೆಳ್ಳಿ ಭಂಗಾರ ಹರಿವಾಣಗಳು ಮನೆಯೊಳಗೆ । ತುಳುಕುತಿಹ ಕನಕದ ರಾಶಿಗಳು ॥ ಘಳಿಗೊಳಗೆ ಈ ಭಾಗ್ಯ ಕಾಡೆ ಬೆಳದಿಂಗಳು । ಉಳಿದೊಬ್ಬರ ಕಾಣೆ ಚರಲಕ್ಷ್ಮಿಯೆಂದು ॥ ೩ ॥ ದೇವತೆಗಳನೆ ಕೈಯೋಳ್ಸೆರೆಪಿಡಿತಂ । ದವ ಬಲುತಿಹ ರಾವಣನ ಬದುಕೇನಾಯಿತು ॥ ಜೀವರ ಪಾಡೇನು ನಾವು ಧೊರೆ ಯೆಂಬೋದಕ್ಕೆ । ಸಾವಿನ ಮನೆ ಪೊಕ್ಕು ಸಹಸಪಡಬಹುದೇ ॥ ೪ ॥ ಇಂತು ಈ ಪರಿಯೊಳನಂತ ರೂಪಾದರು । ಎಂತು ಪೇಳಲಿ ಇವರ ಪೆಸರುಗಳನು ॥ ಸಂತತದಿ ವರದಪುರಂದರವಿಠಲನ । ಅಂತರಂಗದಿ ಭಜಿಸಿ ಸುಖಿಯಾಗು ಮನವೆ ॥ ೫ ॥ ಶ್ರೀ ॥

## ೧೨೩. ರಾಗ ಪಂತುವರಾಳಿ, ಅಟತಾಳ.

ಅನ್ಯಸತಿಯರೊಲಿಮೆಗೊಲಿದು ಅಧಮಗತಿಗೆ ಬೀಳಲ್ಯಾಕೆ ॥ ಪಲ್ಲ ॥ ತನ್ನ ಸತಿಯರೊಲಿಮೆಗೊಲಿದು ತಾನು ಸುಖಿಸಬಾರದೇ ॥ ಅನುಪಲ್ಲ ॥

ಯಿಂದು ಮಲವನ್ನ ಬಿಡಿಸಿ ಮೇಲು ವಸ್ತ್ರವನ್ನು ತೊಡಿಸಿ। ಅಂದವಾದ ಆಭರಣವಿಟ್ಟು ಅರ್ತಿಯಿಂದ ನೋಡುತ ॥ ಗಂಧ ಕಸ್ತೂರಿ ಪುನುಗು ಪೂಸಿ ಘಮಕದಿಂದ ಹೂವು ಮುಡಿಸಿ। ಸಂಕ್ಷಮದಿ ಸಂತೋಷಬಡುವ ಸುಖವು ತನಗೆ ಸಾಲದೇ ॥ ೧ ॥ ಪೊಂಬಣ್ಣ ಎಸವ ವೈಯ್ಯದೊಳು ಒಲಿವ ಕುಚಕ್ಕೆ ಕೈಯ್ಯನಿಟ್ಟು । ಕಂಬುಕಂಧರವ ನೋಡಿ ಕಸ್ತೂರಿ ನಿಟ್ಟು ಮುಟ್ಟಿಸುತ ॥ ಹಂಬಲಿಸಿ ಸತಿಯು ನೋಡಿ ಹಲವು ಬಂಧದಿಂದ ಕೂಡಿ। ಸಂಕ್ಷಮ ಸಂತೋಷಬಡುವ ಸುಖವು ತನಗೆ ಸಾಲದೇ ॥ ೨ ॥ ಸತಿಪತಿಯು ಏಕವಾಗಿ ಸರ್ವಜನರ ಹಿತವು ಚಿಂತಿಸಿ । ಅತಿಥಿಯನ್ನು ಪೂಜೆಮಾಡಿ ಹೊಂದೆನ್ನಿಸಿಕೊಳ್ಳುತ ॥ ಕ್ಷಿತಿಯೊಳಧಿಕವಾದ ಗುರು ಪುರಂದರವಿಠಲನ್ನ ಪಾದವನು ಸ್ಮರಿಸಿ । ಸತಿಸುತರು ಹಿತರು ನೀವು ಸುಖದಿಂದ ಆಳಿರೋ ॥ ೩ ॥ ಶ್ರೀಃ ॥

## ೧೨೪. ರಾಗ ಕೇದಾರಗೌಳ, ತ್ರಿಪುಟತಾಳ.

ಕರದು ಮುದ್ದಿಸುವ ಗೋಪಿಯ ಭಾಗ್ಯಕೆಣೆಯುಂಟೆ ॥ ಪಲ್ಲ ॥ ಗುರು ಕುಲಾಂಬುಧಿಚಂದ್ರ ಕೃಷ್ಣಾ ಬಾ ಬಾ ಬಾಯೆಂದು ॥ ಅನುಪಲ್ಲ ॥ ಸವ್ಯಹಸ್ತದಿ ಅಪಸವ್ಯಕರವ ಪಿಡಿದು। ನವ್ಯ ಸುಧಾಂಗುಲಿ ಸವಿವುತಲಿ॥ ಅವ್ಯಕ್ತ ಮಧುರೋಕ್ತಿಗಳಿಂದಲಾಡುವ । ಭವ್ಯಮೂರುತಿ ಕೃಷ್ಣಾ ಪರಮಪುರುಷನೆಂದು ॥ ೧ ॥ ಒಂದು ಕುಚವನುಣುತ ಮತ್ತೊಂದು ಕುಚವ ಹಿಡಿದು। ಸಂದಿಸಿ ಮೊಗವನಾಲೋಕಿಸುತ ॥ ಚಂದದಿ ಕಿರಿನಗೆ ಯಿಂದ ಬೊಮ್ಮಾಂಡವ । ಅಂದು ಬಾಯೊಳು ತೋರ್ದ ಕೃಷ್ಣಾ ಬಾ ಬಾಯೆಂದು ॥ ೨ ॥ ಆನೆ ಬಂತೆಂದಾನೆಯೆನಲು ತೊಡೆಯಲ್ಲಿ । ನಿಸಿ ಟಿಸೆ ಲೋಕಂಗಳು ಬೆರಗಾಗುತ ॥ ಜ್ಞಾನನಿಧಿಯೆ ಗುರುಪುರಂದರ ವಿಠಲ ಇ। ದೇನೋ ನಿನ್ನ ಮಹಿಮೆ ನಾನೇನರಿಯೆನೆಂದು ॥ ೩ ॥

## ೧೨೫. ರಾಗ ಕಾಂಬೋಧಿ, ಅಟತಾಳ.

ಕೂಡಿಕೊಂಡಾಡಲೊಲ್ಲರೋ ರಂಗಯ್ಯ ನಿನ್ನ ॥ ಪಲ್ಲ ॥ ಕೇಡಿಗವ ಇವ ನಮ್ಮ ಕೆಲಸ ಕೆಡಿಸುವನೆಂದು ॥ ಅನುಪಲ್ಲ ॥ ತನ್ನ ತಾಯಿ ವಡ

ಹುಟ್ಟಿದಣ್ಣನಾ ಕೊಂದವನೆಂದು । ಅನ್ನಿಗರ ಬಿಡುವನೆ ಯೆಂದೆಲ್ಲ ವರ್ತಾಡಿಕೊಂಡು ॥ ೧ ॥ ಹಸಿದಳುತಿರೆ ನೇವರಿಸಿ ಮೊಲೆಯುಡಿದ ವಳ । ಅಸು ಹೀರಿ ಕೊಂದ ಮಾರಿಮಗನೆಂದು ರಂಗ ನಿನ್ನ ॥ ೨ ॥ ಆವುಕಾಯಲು ಪೋಗಿ ಹಾವಿನ ಮಡುವು ಧುಮುಕಿ । ಠಾವು ಬಿಡಿಸಿದವ ಕೇವಲ ಹೀನನೆಂದು ॥ ೩ ॥ ಗೊಲ್ಲತೇರ ಮನೆಯಲ್ಲಿ ಪಾಲು ಮೊಸರು ಬೆಣ್ಣೆಯ । ನಿಲ್ಲದೆ ಮೆಲ್ಲುವನು ಕಳ್ಳನೆಂತೆಂದು ನಿನ್ನ ॥ ೪ ॥ ತರುಳ ಪುಟ್ಟನು ಯೆಂದು ಕರುಣದಿ ಸಲಹಿದವರ । ಬೆರಳೆಣಿಸಿ ಕೊಂದನಿವ ಪರಮಾ ಕಿತವನೆಂದು ॥ ೫ ॥ ಸುಲಭದಿಂದಲಿ ಬಲು ಖಳರ ಬಳಗವನೆಲ್ಲ । ಛಲದಿಂದ ಕೊಂದನಿವ ಕೊಲೆಗಾರ ರಂಗನೆಂದು ॥ ೬ ॥ ಕರುಣಾನಿಧಿಯೆ ಗುರುಪುರಂದರವಿಠಲ । ಧರೆಯ ಮಾನವರು ನಿನ್ನ ಚರಿಯ ಈ ಪರಿಯೆಂದು ॥ ೭ ॥ ಶ್ರೀ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೨೬. ರಾಗ ನಾದನಾಮಕ್ರಿಯೆ, ಆದಿತಾಳ.

ದಡಮಾಡಿದರು ಯಮನಾಳುಗಳು । ಓಡಿಬಂದರು ಏಳೇಳೆನುತ । ಏಳಾನೆಳದರು । ಪಾಪಿಯ । ಬೀಳಾನೆಳದರು ॥ ಪಲ್ಲ ॥ ಭವಂತಿ ಮಾಳಿಗೆ ದೊಡ್ಡ ಪಡಸಾಲೆ । ಚಿಕ್ಕ ಮಕ್ಕಳು ದೊಡ್ಡ ಮಕ್ಕಳು । ಆದ ಮದುವೆಯು ಆಗದ ಮದುವೆಯು । ಒಂದೊಂದು ಸಾವಿರ ಸಾಲವ ಕೊಟ್ಟು । ಬಡ್ಡಿ ಬಾಚಿ ಬರಲೇ ಇಲ್ಲ ॥ ಬಿಟ್ಟು ಹ್ಯಾಂಗೆ ಬರಲೋ । ಮನ । ಕೆಟ್ಟು ಹ್ಯಾಂಗೆ ಬರಲೋ ॥ ೧ ॥ ಚಿತ್ರದ ಮನೆಗಳು ಬೆಳ್ಳಿಕಂಬ । ಚಿನ್ನದ ಜೋಡೆ ರತ್ನದ ಕೆಲಸ । ಉಪ್ಪರಿಗೆ ನೋಡಿ ಪ್ರೀತಿಯಾಗಿ ನಾಸಿರುವೋದು ಕಂಡು ॥ ಕರಿವೋರೇನೊ ಯೆನ್ನ । ಯಮನೇ । ಎಳಿವರೇನೊ ಯೆನ್ನ ॥ ೨ ॥ ನಿನ್ನೆ ಮೊನ್ನೆ ಒಬ್ಬಳು ಕನ್ನೆ ಮದುವ್ಯಾದೆ । ಪೊನ್ನು ಭಂಗಾರ ಬೆಳ್ಳಿ ಭಾಳಾ ಎನ್ನ । ಮನೆಯಲಿ ಕರಿವೋದು ನೂರೆಂಟಿಮ್ಮ । ಉಂಬೋ ಉಡುವೋ ಪ್ರಾಯವ ಬಿಟ್ಟು ॥ ನಿನ್ನಾಣೆ ಬರಲಾರೆನೋ । ಯಮನೇ । ಎನ್ನಾಣೆ ಬರಲಾರೆನೋ ॥ ೩ ॥ ದಡ್ಡಂ

ತೂಕ್ಕರು ದೂತರು ಕೋಪದಿ । ಕಡ್ಡಾಯವಮಾಡಿ ಕರಿಯಲು ಅವನ । ಬಡ್ಡಿ ಫಣಿವರ ಬರಲೇ ಇಲ್ಲ ॥ ದೊಡ್ಡವರು ಬಂದರಲ್ಲ । ಇನ್ನು ಮೂರು । ಚಿಕ್ಕವರು ಬಂದರಲ್ಲ ॥ ೪ ॥ ದೊಡ್ಡತಲೆ ಯಮನ ದೂತರು । ಗಡ್ಡದ ದೂತರು ಓಡಿಬಂದರು । ದೊಡ್ಡ ನಾಯಿಗಳ ಟೊಂಕಕೆ ಬಿಗಿದು । ಚಿಕ್ಕ ನಾಯಿಗಳ ಎಡಕೈಲಿ ಗೊಂಡು । ಬತ್ತೀಸಾಯುಧ ನ್ಪೈಲಿ ಧರಿಸಿ ॥ ದೊಡ್ಡ ಈಟಿಯುವರೊ । ಇನ್ನು ಮೂರು । ಚಿಕ್ಕ ಈಟಿ ಯುವರೋ ॥ ೫ ॥ ಕತ್ತಲು ಯೆಂಬೊದು ಮುನ್ನೂರು ಮೂ । ವತ್ತೆರಡು ಗಾವದ ಘೋಣಿಗೆ ಒಂದು । ಉಕ್ಕಿನ ಧ್ವಜಗಳು ಅದರಲಿ ನೆಗ್ಗಿನ ಮುಳ್ಳು ॥ ನಡಿಯಲಾರೆ ನಾನು । ಯಮನೇ । ತಡಿಯಲಾರೆ ನಾನು ॥ ॥ ೬ ॥ ಕಾಶೀತೀರ್ಥವು ಬೇಡದೆನಿವನು । ಶುಂಟಿ ಬೆಲ್ಲವು ಬೇಡಿದ ವನು । ಕಾಲಕಂಟಕರು ಸೀಸವು ಕಾಸಿ ॥ ಹೊಯಿದರು ಬಾಯೊಳಗೆ । ಅವನಿಗೆ । ಹೊಯಿದರು ಬಾಯಿ ವಳಗೆ ॥ ೭ ॥ ಏನೇನು ಪಾಪವು ಮಾಡಿದನಿವನು । ಏನೇನು ಕರ್ಮವು ಮಾಡಿದನಿವನು । ಅಕ್ಕತಂಗೇರ ಒದ್ದವನಿವನು । ತಾಯಿತಂದೆಗಳ ಬಯಿದವನಿವನು । ದಾರಿಗೆ ಮುಳ್ಳು ಹಾಕಿವನಿವನು । ಹರಿದಿವಸದಲಿ ಉಂಡವನಿವನು ॥ ನರಕಕ್ಕೆ ನೂಕಿ ರೋ । ಕುಂಭೀ । ಪಾಕಕ್ಕೆ ನೂಕಿರೋ ॥ ೮ ॥ ಹಿಂದೆ ಮಾಡಿದವರಿಗೆ ಓಂಗೆ ಇಷ್ಟು ತೆರವಾಯಿತು । ಮುಂದೆ ಜನರು ತಿಳಿದು ಬದುಕಿರಿ । ಶ್ರೀಗುರುಪುರಂದರವಿಠಲರಾಯರ ॥ ಸ್ಮರಣೆಯು ಮಾಡಿರೊ । ಜನರು । ಧರ್ಮವು ಮಾಡಿರೋ ॥ ೯ ॥ ಶ್ರೀ ॥

## ೧೨೭. ರಾಗ ಮಾಂಜಿಶಭೈರವಿ, ಆದಿತಾಳ.

ಏನು ಅನುಮಾನ ಮಾಡುತೀ ವ್ಯರ್ಥ ಮಾಡುತೀ । ಶ್ರೀನಿವಾಸನ ನಾಮವೇ ಗತಿಯೋ ॥ ಪಲ್ಲ ॥ ನೀರುಮೇಲಿನ ಗುಳ್ಳೆಗೆ ಸರಿ ಈ ಶ । ರೀರ ಸ್ಥಿರವೆಂದು ನಂಬದಿರೋ ॥ ನಾರಿಮಣಿಯರ ನೋಡಿ ಮೋಹಿಸು ವದು । ನಿರಯವೋ ನಿತ್ಯನಿಧಾನ ತಿಳಿಯೋದು ॥ ಅನುಪಲ್ಲ ॥ ಆಗ ಭೋಗ ದೇಹತ್ಯಾಗ ಕಾಲದಲ್ಲಿ । ಸಾಗಿಬಾರರೊಂದು ತಿಳಿದು

ನೋಡೋ ॥ ಭೋಗಿಶಯನನ ನಿತ್ಯ ನೀಮದಕಿಂತ । ಭಾಗ್ಯವು ಕಾಣೆ ಕಲಿಯುಗದಲ್ಲಿ ॥ ೧ ॥ ಸತಿಸುತರಲ್ಲಿ ನೀ ಮಾಡುವ ಪ್ರೀತಿ ಶ್ರೀ । ಪತಿಯಲಿ ಮಾಡೋ ನಿಮಿಷ ಮಾತ್ರ ॥ ಸತತ ಸಚ್ಚಿದಾನಂದಮೂರುತಿಯಾ । ಸ್ತುತಿಸಿದವರ ಕಾಯುವನೆಂಬೋ ಪ್ರಖ್ಯಾತ ॥ ೨ ॥ ಮೂಢ ಮನುಜರ ಸೇವೆ ಬಿಡೋ । ಹರಿಯ ಸೇವೆ ನೀ ಬಿಡದಿರೋ ॥ ವೃಥವಾಗಿ ನಮ್ಮ ಮಧ್ವಪತಿ । ಪುರಂದರವಿಠಲನಲ್ಲಿ ಮನಸು ಇಡೋ ॥ ೩ ॥ ಶ್ರೀ ॥

## ೧೨೮ ರಾಗ , ಆದಿತಾಳ.

ಅಂದೇ ನಿರ್ಣೈಸಿದರು ಕಾಣೋ । ಇಂದಿರಾಪತಿ ಪರದೈವವೆಂದು ॥ ॥ ಪಲ್ಲ ॥ ಅಂದು ಚತುರ್ಮುಖ ನಾರದನಿಗೆ ತಮ್ಮ । ತಂದೆ ಶ್ರೀಹರಿ ಪರದೈವವೆಂದು ॥ ಸಂದೇಹವು ಪರಿಹರಿಸಿದ ದ್ವಿತೀಯ । ಸ್ಕಂಧದೊಳ್ಪದಧ್ಯಾಯದಲಿ ॥ ೧ ॥ ವೇದೋಪಾಸ್ಯಕ ವೇದವಿಧಾಯಕ । ವೇದಾತೀತಾ ನಮನಂತೆ ॥ ವೇದಾಕ್ಷರಗಳು ಹರಿನಾಮಗಳೆಂದು । ವೇದಾಂತ ಶ್ರುತಿಶಾಸ್ತ್ರಗಳಿಂದ ॥ ೨ ॥ ಸಂದೇಹಾತ್ಮ ವಿನಾಶಸಹಿತನೆಂದು । ಸ್ಕಂಧಗಳೆಲ್ಲ ಸಾರುತಿರೆ ॥ ತಂದೆ ಪುರಂದರವಿಠಲರಾಯನ । ಸಂದೇಹವ ಬಿಟ್ಟು ತುತಿಸೆಲೊ ಮನುಜಾ ॥ ೩ ॥ ಶ್ರೀ ॥

## ೧೨೯. ರಾಗ ಪೂರ್ವಿ, ಅಟತಾಳ.

ಆಡಿದನೋಕುಳಿಯ ನಮ್ಮ ರಂಗ ಆಡಿದನೋಕುಳಿಯ ॥ ಪಲ್ಲ ॥ ರಂಬಿಸಿ ಕರದು ಚುಂಬಿಸಿ ವಗದನು ರಂಭೇರಿಗೋಕುಳಿಯ ॥ ಅನುಪಲ್ಲ ॥ ಕದಂಬ ಕಸ್ತುರಿಯ ಅಳಿ ಗಂಧದ ಓಕುಳಿಯ । ಬಂದರು ಹೊರಗಿನ್ನಾರೇರಾಡುತಂದದಚಂದದಿ ಓಕುಳಿಯ ॥ ೧ ॥ ಪಟ್ಟಮಂಚದ ಮೇಲೆ ನಮ್ಮ ರಂಗ ಇಟ್ಟ ಮುತ್ತಿನ ಹಾರ । ಬಟ್ಟುಕುಚಕ್ಕೆ ಕಣ್ಣಿಟ್ಟೊಗದನು ಕುಟ್ಟಿದನೋಕುಳಿಯ ॥ ೨ ॥ ಆರ್ಹತ್ತುಸಾವಿರ ಗೋಪಸ್ತ್ರೀರೆಲ್ಲರು ಕೂಡಿ । ಮಾರನಯ್ಯ ಶ್ರೀಪುರಂದರವಿಠಲ ಹರಿಸಿ ಓಕುಳಿಯ ॥ ೩ ॥ ಶ್ರೀ ॥

## ೧೩೦. ರಾಗ ಭೈರವಿ, ಝಂಪೆತಾಳ.

ಆರ ಮಗನೆಂದರಿಯೇವೆ । ಇವ ನಮ್ಮ । ಕೇರಿಯೊಳು ಸುಳಿದು ಪೋದನಮ್ಮ ॥ ಪಲ್ಲ ॥ ಪಾರಿಜಾತವ ತುರುಬಿದ । ಕಸ್ತೂರಿ । ಗೀರು ಗಂಧವ ತಿದ್ದಿಹನಮ್ಮ ॥ ದೂರದಲಿ ನಿಂತುಕೊಂಡು । ಸೋಗೆಕಣ್ಣ ದಾರೆನೋಟವ ನೋಡುವನಮ್ಮ ॥ ೧ ॥ ಶಂಖಚಕ್ರವ ಪಿಡಿದಿಹ । ತಾನು ಬಲು । ಬಿಂಕದಲಿ ಕೊಳಲೂದುವನಮ್ಮ ॥ ಶಂಕೆಯಿಲ್ಲದೆ ಬದಿಯಲಿ । ಬಂದು ನಿಂತು । ಪೊಂಕದಲಿ ನಲಿದಾಡುವನಮ್ಮ ॥ ೨ ॥ ನೀಲ ಮೇಘದ ಮೈಯವ । ತುಲಸಿವನ । ಮಾಲೆ ಕೊರಳಲಿ ಧರಿಸಿಹನಮ್ಮ । ಬಾಲಪುತ್ರಯುವ ಚೆನ್ನಿಗ । ಬಂದು ಯೆಮ್ಮ । ದಾಲೈಸಿ ಅಪ್ಪಿ ಪೋದನಮ್ಮ ॥ ೩ ॥ ಸೀತೆಯನು ತರಲು ಪೋಗಿ । ಸಾಗರಕೆ । ಸೇತುವೆಯು ಗಟ್ಟಿಸಿದನೇ ಅಮ್ಮ ॥ ದೈತ್ಯ ರಾವಣನ ಕೊಂದು । ಲಂಕೆಯನು ಇತ್ತನೇ ವಿಭೀಷಣನಿಗೆ ಅಮ್ಮ ॥ ೪ ॥ ಗೋಕುಲದೊಳಗೆ ಪುಟ್ಟಿ । ಕೃಷ್ಣ ತಾ । ಗೋಪಿಗೆ ಶಿಶುವಾದನೇ ಅಮ್ಮ ॥ ಆಕಳ್ಹಿಂಡುಗಳ ಕ್ಕಾದು । ರಂಗ ತಾ । ಏಕ ಮಧುರಿಗೆ ಪೋದನೇ ಅಮ್ಮ ॥ ೫ ॥ ಪೀತಾಂಬರವನುಟ್ಟಿಹ । ಪೊಳೆವ ಕಟಿ । ಸೂತ್ರವನು ಧರಿಸಿದವನೇ ಅಮ್ಮ ॥ ಮಾತುಳನ ಕೊಂದು ಪಟ್ಟ । ಗಟ್ಟಿದನೆ । ತಾತ ಉಗ್ರಸೇನಗೆ ಅಮ್ಮ ॥ ೬ ॥ ಮುತ್ತಿನ ಮೂಗುತ್ತಿಟ್ಟು । ಉಡುಪಿಯಲಿ । ನಿತ್ಯ ಪೂಜೆಯಗೊಂಬುವನಮ್ಮ । ಸತ್ಯನೆಂದೆನಿಸಿಕೊಂಡು । ಸುಳಿದನೆ । ಕರ್ತೃ ಪುರಂದರವಿಠಲನಮ್ಮ ॥ ೭ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೩೧. ರಾಗ ರೇಗುಪ್ತಿ, ಝಂಪೆತಾಳ.

ಇನ್ನು ಪುಟ್ಟಿಸದಿರಯ್ಯ ಪುಟ್ಟಿಸಿದಕೆ ಪಾಲಿಸಯ್ಯ । ನನ್ನ ದಯದಿ ತಾರಿಸಯ್ಯ ॥ ಪಲ್ಲ ॥ ನಿನ್ನ ಪಾದಾಂಬುಜವು ನಂಬಿದೆನು ರಘುಪತಿಯೇ । ಬೆನ್ನುಬಿದ್ದೇನು ಭವಬಂಧನವು ಬಿಡಿಸೋ ॥ ಅನುಪಲ್ಲ ॥ ಅಮರೇಂದ್ರವಂದಿತನೆ ಅನಂತಮಹಿಮನೆ । ಕಮಲಸಖತೇಜಕರನೇ ॥ ಅಮಿತಲೋಹಿತನೆ ನೀ ಕಾಮಿತವರದನೇ । ವಿಮಲ ವಿಭೀಷಣಗೊಲಿದ

ದಯದಿಂದಲೆನ್ನ ॥ ೧ ॥ ಅಜಮಿಳ ಅಂಬರೀಷ ಅಕ್ರೂರ ನಾರದಗೆ ಗಜರಾಜ ಗಿರಿಜೇಶಗೆ ॥ ಅಜ ಧ್ರುವ ಅರ್ಜುನಗೆ ನಿಜಭಕ್ತ ಪ್ರಹ್ಲಾದಗೆ । ದ್ವಿಜಗೆ ರುಕ್ಮಾಂಗದಗೆ ಒಲಿದ ದಯದಿಂದಲೆನ್ನ ॥ ೨ ॥ ಎಂದೆಂದಿಗೆ ನಿನ್ನ ಪಾದವೆನಗೆ ನೆಲೆಯಾಯಿತು । ಅಂದು ನಿನ್ನ ಪಾದಭಜನೆ । ಎಂದಿಗೆ ನಿನ್ನ ಪಾದ ಪಿಡಿಸಿ ಸಲಹೋ ಸ್ವಾಮಿ । ಅಂದು ಅಂಜನೆ ಕಂದಗೊಲಿದ ದಯದಿಂದಲೆನ್ನ ॥ ೩ ॥ ಅವರಂತೆ ನಾನಲ್ಲ ಅವರ ದಾಸರ ದಾಸ । ಸವರಿ ಬಿಸುಟೆನ್ನ ದೋಷ ॥ ಪಾವನ್ನಮಾಡಯ್ಯ ಪುಂಡಲೀಕವರದನೇ । ಅವಸರಕೆ ದ್ರೌಪದಿಗೆ ಒಲಿದ ದಯದಿಂದಲೆನ್ನ ॥ ೪ ॥ ಅಂತರಂಗದುಬ್ಬಸವು ನಿನಗೆ ಉಸುರುವೆ ನಾನು । ಸಂತಸಪ ಗೌತಮನ ಸತಿ ಸಲಹಿದಿ ॥ ಸಂತತ ನಿನ್ನ ಭಕ್ತರನು ಪಾಲಿಸುವ ಕಾತುಪಿತ ನಮ್ಮ ಶಿರಿಪುರಂದರವಿಠಲಾ ॥ ೫ ॥ ಶ್ರೀ

## ೧೩೨. ಉದಯರಾಗ, ಝಂಪೆತಾಳ.

ಈ ಜೀವವಿದ್ದು ಫಲವೇನು ಚಲುವ । ರಾಜೀವಲೋಚನನ ನೆನೆಯದ ಪಾಪಿ ತನುವಿನಲಿ ॥ ಪಲ್ಲ ॥ ಅರುಣವುದಯದಲೆದ್ದು ಹರಿಯ ಸ್ಮರಣೆಯು ಮಾಡಿ । ಗುರುಹಿರಿಯರ ಮನದಲ್ಲಿ ನೆನದು ನೆನದು ॥ ಪರಮ ಸುಖಿಯಾಗಿ ನದಿಯೊಳು ಮಿಂದು ರವಿ । ಗರ್ಘ್ಯವನೆರಿಯದ ಪಾಪಿ ತನುವಿನಲಿ ॥ ೧ ॥ ಹೊನ್ನಕಲಶದಲಿ ಅಗ್ರೋದಕವು ಶ್ರೀಹರಿಗೆ । ಚನ್ನಾಗಿ ಅಭಿಷೇಕವನು ಮಾಡಿ ॥ ರನ್ನದುಡಿಗಳು ಉಡಿಸಿ ರತ್ನಗಳು ಅಳವಳಿಸಿ । ಕಣ್ಣಿನಲಿ ನೋಡಲರಿಯದ ಕಪಟ ತನುವಿನಲಿ ॥ ೨ ॥ ತುಲಸಿದಳಗಳು ಪುಷ್ಪಮಾಲಿಕೆಯು ನವರತ್ನ । ಹೊಳೆವ ಕೌಸ್ತುಭ ಕೊರಳಲ್ಲಿ ಪದಕ ॥ ನಳಿನಾಕ್ಷಗಿಟ್ಟು ಕರ್ಪೂರ ಆರತಿಯೆತ್ತಿ । ಕಣ್ಣಿನಲಿ ನೋಡಲರಿಯದ ಕಪಟ ತನುವಿನಲಿ ॥ ೩ ॥ ಪರಿಪರಿಯ ಭಕ್ಷ ಪಾಯಸ ಶಾಕ ಶಾಲ್ಯಾನ್ನ । ನರಣಸ ಘೃತ ಗುಡ ಕ್ಷೀರ ದಧಿಯು ॥ ಪರಮಪುರುಷಗೆ ತಂದು ನೈವೇದ್ಯವನೆ ಮಾಡಿ । ಹರುಷದಲಿ ಕೈಮುಗಿಯಲರಿಯದ ಕಪಟ ತನುವಿನಲಿ ॥ ೪ ॥ ನಿತ್ಯನೈಮಿತ್ಯಕರ್ಮಗಳನು ಮಾಡಿ ಬಹು

ಆರ್ತಿಯಿಂದ ಅತಿಥಿಗಳನೆಲ್ಲ ಕರಿಸಿ ॥ ವಿತ್ತವಿದ್ದಾಗಲೇ ಹರಿಯ ಪೂಜೆ ಯ ಮಾಡಿಸ। ಪುರುಷೋತ್ತಮನ ಪ್ರೀತಿಬಡಿಸದ ವ್ಯರ್ಥ ತನುವಿನಲಿ ॥ ೫ ॥ ಪ್ರತಿದಿನವು ಹರಿನಾಮ ಸಕಲ ವೇದಪುರಾಣ। ಕಥೆಗಳನು ಕೇಳಿ ಮನ ದಣಿದು ದಣಿದು ॥ ಅತಿಶಯದ ಮಧ್ವಮತವನನುಸರಿಸದೆ ಪರ। ಗತಿಗೆ ಸಾಧನವ ಸಾಧಿಸಲರಿಯದಿಹ ಮೂಢ ಈ ತನುವಿನಲಿ ॥ ೬ ॥ ಉರಗಾದ್ರಿಯಲಿ ಚಂದ್ರಪುಷ್ಕರಣಿ ಮೊದಲಾದ। ಪರಿಪರಿ ತೀರ್ಥದಲಿ ಮುಣುಗಿ ಮುಣುಗಿ ॥ ತಿರುವೇಂಗಳಪ್ಪ ಶ್ರೀಪುರಂದರವಿಠಲನ। ಚರಣ ಸೇವೆಯ ಮಾಡಲರಿಯದ ಕಪಟ ತನುವಿನಲಿ ॥ ೭ ॥ ಶ್ರೀ ॥

## ೧೩೩. ರಾಗ ಭೂಪಾಳಿ, ಅಟತಾಳ.

ಇಂದಂಬುಜಾಮುಖಿ ಗೋಪಿ ಮಗನ ನಡಿಸಿದಳಾನೆ ॥ ಪಲ್ಲ ॥ ಕ್ಷೀರ ಸಾಗರದಲ್ಲಿ ವಾಸವಾಗಿ ಮಲಗಿರುವಾನೆ ॥ ಅನುಪಲ್ಲ ॥ ಅಸುರರನ ಸದದಾನೆ ಆಕೆಕೊಟ್ಟಳಿದಾನೆ। ಶಿಶುವ ಪಿಡಿದಂಬರಕೆ ಸಾಗಿಪಾನೆ ॥ ಎಸದು ತೃಣಾವರ್ತನ ಭರದಿ ಮುರಿದಾನೆ। ಶಶಕೃಷ್ಣ ತುರುಗಳನು ಕಾಯಿದಾನೆ ॥ ೧ ॥ ಮಣ್ಣು ಮೆದ್ದಿಯೆನಲು ನಿಗಲಬಾಯಿ ತೆರದಾನೆ। ಕಣ್ಣರಾನಿಗೆ ಜಗವ ಪಾಲಿಪಾನೆ ॥ ಚಿಣ್ಣರೊಡನಾಡುತ ಚಲುವ ತುರುಕಾಯಿದಾನೆ। ಬಣ್ಣಬಾಗೆಸುರರನು ಬಿರಿದು ಮುರಿದಾನೆ ॥ ೨ ॥ ಮಡುವು ಕಲಕುತ ಕಾಳಿಹೆಡೆ ಕುಸಿಯ ತುಳಿದಾನೆ। ಮಡದಿಯರ ವಸ್ತ್ರವನು ಬಿಡದೆ ಕದ್ದಾನೆ ॥ ತಡೆಯದೆ ಯಜ್ಞಾನ್ನಗಳು ಉಂಡು ಒಡನೆ ಮುಕ್ತಿಗೈದಾನೆ। ಕಡುಮುಳುಗಿ ಗಿರಿಯನೆ ಕೊಡೆಯ ಪಿಡಿದಾನೆ ॥ ೩ ॥ ಮನೆಮನೆಗಳಿಗೆ ಹೋಗಿ ಕೆನೆಮೊಸರು ಸವಿದಾನೆ। ಎನುತಾಗೆ ಪಾಲುಬೆಣ್ಣೆಯನು ಸುರಿದಾನೆ ॥ ವನಿತೆಯರ ವರ್ಜಿಸಲು ಓಡಿ ಮೊರೆಹೊಕ್ಕಾನೆ। ಚಿನುಮಯಾಂತಕ ಕೃಷ್ಣ ಚಲುವ ತುರುಗಾಯಿದಾನೆ ॥ ೪ ॥ ಗೊಲ್ಲರಮಕ್ಕಳ ಕೂಡಿ ಗೋವುಗಳ ಕಾಯಿದಾನೆ। ಕಡಲೆ ಅನ್ನವುಂಡು ಕಡುಸೊಕ್ಕಿದಾನೆ ॥ ಎಲ್ಲರ ಹೃದಯದಲ್ಲಿ ವಾಸವಾಗಿರುಥಾನೆ। ಅಂದು ನಾಟಕ ಕೃಷ್ಣ ಚಲುವ ತುರುಕಾಯಿದಾನೆ ॥ ೫ ॥

ಕೊಳಲ ಧ್ವನಿಗಳಿಗೆ ಹೆಂಗಳನು ಭ್ರಮಿಸಿಗೈದಾನೆ । ಲಲನೆಮುಖಿ ಜಾಲೇರ ಬಳಲಿಪಾನೆ ॥ ನಳಿನಮುಖಿಯರ ಹರುಷಗೊಡಿಸಿ ಸುಖವೀವಾನೆ । ಜಲದೊಳಗೆ ಹೆಂಗಳನು ಭ್ರಮಿಸಿ ಮುಕ್ತಿಗೈದಾನೆ ॥ ೬ ॥ ಅಂದು ಮಥುರೆಗೆ ಪೋಗಿ ಬಲು ಬಿಲ್ಲನೆ ಮುರಿದಾನೆ । ಕೊಂದು ರಜಕನ ಕುಬುಜೆಯ ಅಂದಗೈದಾನೆ ॥ ಅಂದು ಮಲ್ಲರ ಮಡುಹಿ ಮಾವನ ಕೊಂದಾನೆ । ತಂದೆ ಶ್ರೀಪುರಂದರವಿಠಲ ಮರಿಯಾನೆ ॥ ೭ ॥ ಶ್ರೀ ॥

## ೧೩೪. ರಾಗ ಶಂಕರಾಭರಣ, ಆದಿತಾಳ.

ಏನಾಯಿತೋ ನಿನಗೆ ಶ್ರೀಹರಿಹರಿ ॥ ಪಲ್ಲ ॥ ನಾನಿನ್ನೇನು ಮಾಡಲಿ ಕಂದಾ ॥ ಅನುಪಲ್ಲ ॥ ಅಂಗಳದೊಳಗಾಡೋ ಗೋಪಿಕಂದಗೆ ಗ್ರಹ ಸೋಕಿ ಅಂಗಾರನಿಟ್ಟಳು ಗೋಪಿ ತಾಂ । ರಕ್ಷೆಯ ಕಟ್ಟಿದಳು ಅಂಗನೆ ಹರಿಯ ಕಂಡು ಗೋಪಿ ತಾಂ ಕಂಗೆಟ್ಟಳು ಆಗ ॥ ೧ ॥ ಧೂಪ ಕಾಣಿಕೆನು ತೆಕೊಂಡು ನೆರೆಮನೆ ಜಾಣೇರ ಜಾಣಿ ರಂಗಗೆ ಪೇಳೆ । ಆಕಾಶದ ಬೊಮ್ಮನೆ ಸೋಕಿಹದು ಬೊಮ್ಮಗೆ ಆಹುತಿಯ ಕೊಟ್ಟರೆ ಗುಣವಾಹೋದು ನಿನ್ನ ಕಂದಗೆ ॥ ೨ ॥ ಪೂತನಿಯ ಮೊಲೆಯನುಂಡು ಕೃಷ್ಣಮ್ಮ ತಾ ಭೀತಿಗೊಂಡನು ತಾಯೆ । ಐದು ಮೊಘೆಯ ತುಪ್ಪ ಜೇಗನೆ ಆಹುತಿಯ ಕೊಟ್ಟರೆ ಗುಣವಾಗೋದು ನಿನ್ನ ಕಂದಗೆ ॥ ೩ ॥ ಐದು ಮಣಗೋಧಿಟ್ಟು ಐದು ಮೊಘೆಯ ತುಪ್ಪ ಪಡಿವವಳೆ ಬಡಿಸುತಿರೆ । ಕೃಷ್ಣಮ್ಮ ತಾ ಕಡೆಕಣ್ಣಲಿ ನೋಡಿ ಬಡಿವಾಣ ಬಳದುಂಡ ಬೊಮ್ಮ ಬಾಯಿಲಿ ಮುಣ್ಣಿಂದ ॥ ೪ ॥ ಸೃಷ್ಟಿಯೊಳಗಿಂಥಾ ಸ್ವಾಮಿ ದುಷ್ಟಮೂರುತಿ ಕಾಣೆ । ತೊಟ್ಟಿಲೊಳಗೆ ಮಲಗಿದ್ದ ಶ್ರೀಪುರಂದರವಿಠಲ ನಗುತಿದ್ದ ॥ ೫ ॥ ಶ್ರೀ ॥

## ೧೩೫. ರಾಗ ಶಂಕರಾಭರಣ, ಝಾಪುತಾಳ.

ಕಂಡು ಮನ ಹಿಗ್ಗಿತು ರಂಗಯ್ಯನ ಕಾಣದೆ ಮನ ನಿಲ್ಲದು ॥ ಪಲ್ಲ ॥ ಮಲ್ಲಮಲ್ಲರ ಗೆಲಿದ ರಂಗಯ್ಯ ಮಲ್ಲಘಂಟೆನೆ ಬಿಗಿದ । ಬಿಲ್ಲಹಬ್ಬಕೆ ಬಂದು ಮಾವ ಕಂಸನ ಕೊಂದ ॥ ೧ ॥ ಕತ್ತಲೆಯನು ಸುತ್ತಿರೆ ರಂಗಯ್ಯ

ಕಸ್ತೂರಿತಿಲಕನಿಟ್ಟು । ಚಿತ್ರಮೂರುತಿ ಚಿನ್ನ ಕೊಳಲನೂದುತ ಬಂದ ॥ ॥ ೨ ॥ ಹೇಮಮಕರ ಡೊಂಕನೆ ರಂಗಯ್ಯ ಅಮಿತಫಲದಾತನೆ । ಕಾಮಿತ ಫಲವೀವ ಪುರಂದರವಿಠಲ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೩೬. ರಾಗ ಮಣಿರಂಗು, ಅಟತಾಳ.

ಕಾಣದಿರಲಾರೆ ಪ್ರಾಣಕಾಂತನ । ವೇಣುನಾಥನ ತೋರಿಸೆ ॥ ॥ ಪಲ್ಲ ॥ ಜಾಣೆ ಕೃಷ್ಣನು ಕೊಳಲನೂದುತ ಕಾಣದೆಲ್ಲಿಗೆ ಪೋದನೇ ॥ ॥ ಅನುಪಲ್ಲ ॥ ಗೋಕುಲದಲ್ಲಿ ಆಕಳ ಕಾಯುವ । ಸಕಲ ಸುರಮುನಿ ಸೇವ್ಯನ ॥ ವ್ಯಾಕುಲಾಂತಕ ಲೋಕನಾಯಕ । ಲಕುಮಿನಲ್ಲನ ತೋರಿಸೆ ॥ ೧ ॥ ಹತ್ತು ಆರು ಸತಿಯ ಸಾವಿರ ರ। ವತಿ ಆಳಿಸಿದ ಭೂಪನ ॥ ಸಂತತ ಅವನ ಸ್ತುತಿಸಿದವರಿಗೆ । ಅತಿಶಯಂಗಳ ಕೊಡುವನ ॥ ೨ ॥ ನಾರಿ ಸಭೆಯೊಳು ಸೀರೆ ಸೆಳೆಯಲು । ವಾರಿಜಾಕ್ಷನ ನೆನಿತಲಿ ॥ ಮಾರನಯ್ಯ ಶ್ರೀಕರುಣಾಸಾಗರ । ನಾರಿಗೆ ಅಕ್ಷಯವಿತ್ತನೇ ॥ ೩ ॥ ಗಂಗೆಜನಕ ಮುರಾರಿ ಶ್ರೀಧರ । ಮಂಗಳಾಂಗ ಗೋವಿಂದನ ॥ ರಂಗನಾಥ ಮಾತಂಗವರದ ಭು । ಜಂಗಶಯನ ಶ್ರೀಕೃಷ್ಣನ ॥ ೪ ॥ ಇಂದಮುಖಿ ಕೇಳಿನ್ನ ಬಿನ್ನಪ । ಇಂದು ಕರಗಳ ಮುಗಿವೆ ನಾ ॥ ಇಂದು ಪುರಂದರ ವಿಠಲರಾಯನ । ಮಂದಗಮನೆ ನೀ ತೋರಿಸೆ ॥ ೫ ॥ ಶ್ರೀಃ ॥

## ೧೩೭. ರಾಗ ಶಾಮುಕಲ್ಯಾಣಿ, ಛಾಪುತಾಳ.

ಕಾಲಿಗೆ ಬಿದ್ದನೊ ಕೈಯ ಬಿಡೊ । ಬಾಳು ಬದುಕು ಮುತ್ತೈದಾಗಿ ॥ ॥ ಪಲ್ಲ ॥ ಅಧರ ಚುಂಬಿಸದಿರೊ ರಂಗಯ್ಯ । ಅಧರ ಸವಿಯೊಂದು ಸವಿದೇನೆ ॥ ೧ ॥ ಎದೆಯ ಮುಟ್ಟದಿರೊ ಎಲೊ ರಂಗ । ಅದು ಮರದ ಮೊಗ್ಗೊಂದು ಹಿಡಿದೇನೆ ॥ ೨ ॥ ಅತ್ತೆ ಕಂಡರೆ ರಚ್ಚೆನಿಕ್ಕ್ಯಾಳು । ಅವಳಿತ್ತ ಬಂದರೆ ಮರುಳಾಗುವಳೆ ॥ ೩ ॥ ಗಂಡ ಕಂಡರೆ ಎನ್ನ ಕೊಂದಾನು । ಎದೆ । ಗುಂಡಿಗೆಷ್ಟು ಇಲ್ಲಿ ಬರಲಿಕ್ಕೆ ॥ ೪ ॥ ನಾದಿನಿ ಎನ್ನನ

ಸರಾಳು । ಅತಿ । ಮೋದವಾಗಿ ಇಬ್ಬರಾಳುವೆ ॥ ೫ ॥ ಮನವೇ ಕೊಂಬ ವರೆಲ್ಲದೆರಗಳು । ಎನ್ನ । ಪುರಂದರವಿಠಲನೆಂದರಿಯೇನೆ ॥ ೬ ॥ ಶ್ರೀಃ ॥

## ೧೩೮. ರಾಗ ಕಾಂಬೋಧಿ, ಝಂಪೆತಾಳ.

ಡಂಭಕ ಭಕ್ತಿಗೆ ಮೆಚ್ಚಿ ಕೊಡನು ಕೃಷ್ಣ ॥ ಪಲ್ಲ ॥ ಡೊಂಬ ಲಾಗವು ಹಾಕಿ ಡೊಂಡೊಂಡೆ ಹೊರಳಿದವರಿಲ್ಲ ॥ ಅನುಪಲ್ಲ ॥ ಹೆಚ್ಚು ಬಯಿಸಿದ ರಿಲ್ಲ ಹೆಚ್ಚರಿಕೆ ತತಿಗಿಲ್ಲ । ಕಚ್ಚಿಕ್ಕೈ ಶುದ್ಧಲಿಲ್ಲದೆ ಕರ್ಮವಿಲ್ಲ ॥ ಬಚ್ಚಿಟ್ಟ ರಿಲ್ಲ ನಿರ್ಭಾಗ್ಯರಿಗೆ ಇಂದೆನ್ನ । ಅಚ್ಯುತಾನಂತ ಶ್ರೀಹರಿಯ ನೆನೆ ಕಂಡ್ಯ ಮನವೆ ॥ ೧ ॥ ಕೆಟ್ಟೆನೆಂದರು ಇಲ್ಲ ಕ್ಲೇಶಬಟ್ಟರು ಇಲ್ಲ । ಅಟ್ಟಮಡಸಿ ನಿಷ್ಠೂರ ಆಡಿದವರಿಲ್ಲ ॥ ವಟವಟನೆ ಕಪ್ಪೆಯಂತೆ ವದರಿಕೊಂಡರು ಇಲ್ಲ । ಬೆಟ್ಟದಿಂದ ತಲೆಕೆಳಗೆ ಬಿದ್ದರೂ ಇಲ್ಲ ॥ ೨ ॥ ಕನ್ನಯಿಟ್ಟರು ಇಲ್ಲ ಕಡ ದಾಡಿದರು ಇಲ್ಲ । ಕುನ್ನಿಯಂತ್ಯಾವಾಗ ಕೂಗಿದರು ಇಲ್ಲ ॥ ತಾನೆ ಕೊಡದನಕೆ ಕೊಸರಿಕೊಂಡರು ಇಲ್ಲ । ಚನ್ನ ಪುರಂದರವಿಠಲನ್ನ ದೂರಿದರಿಲ್ಲ ॥ ೩ ॥ ಶ್ರೀಃ ॥

## ೧೩೯. ರಾಗ ಭೂಪಾಳಿ, ತಾಳ.

ಏಳಯ್ಯ ಬೆಳಗಾಯಿತು ॥ ಪಲ್ಲ ॥ ಬೆಳಗಾಯಿತೇಳಯ್ಯ ಬಿಸಿಲು ಮೈಸ್ಸಿ ದೋರುತಿದೆ । ಸುಳವು ದೊರೆಯು ನಿಮ್ಮ ಹಾರೈಸಿ ನಿಂದಾರೆ ॥ ತಡವು ಮಾಡದಿರಯ್ಯ ಸ್ವಾಮಿ ತಿರುಮಲೆರಾಯ । ಶೆಳೆಮಂಚದಿಂದ ಏಳೊ ॥ ॥ ೧ ॥ ವೇದವನು ತರಲೇಳು ಮಂದರವ ಪೊರಲೇಳು । ಭೇದಿಸಿ ಅಸುರ ರನ ದಾಡಿಂದ ತರಲೇಳು ॥ ಕಾದು ಹಿರಣ್ಯಕನ ಕರುಳು ಕೊರಳೊಳಗೆ ಧರಿಸೇಳು । ಕ್ಯಾದು ಬಲಿ ಬಾಗಿಲದೊಳು ॥ ೨ ॥ ಭೇದಿಸಿ ಭೂಮಿ ತ್ರಿಪಾದದಿಂದಳಿಬೇಕು । ಛೇದಿಸಿ ಕ್ಷತ್ರಿಯರ ಕೊಡಲಿಂದ ಕಡಿಯೇಳು ॥ ಸಾಧಿಸಿ ಶರಧಿಯನು ಸೇತುವೆಯ ಕಟ್ಟೇಳು । ನಂದಗೋಪನ ಉದ ರದಿ ॥ ೩ ॥ ಪುರಮೂರು ಗೆಲಬೇಕು ಅರಿವೆಯನೆ ಕಳೆಯೇಳು । ದುರು ಳನ ಕೊಲ್ಲಬೇಕು ತುರಗವಾಹನನಾಗು ॥ ಪರಿಪರಿಯ ಕೆಲಸಗಳು

ಮಾಡಲುದ್ಯೋಗಿಸಿ । ಮರದು ನಿದ್ರೆಯ ಗೈವರೇ ॥ ೪ ॥ ಆಲದೆಲೆ ಯಿಂದೇಳು ಮಹಲಕುಮಿ ಬಂದಾಳೆ। ಹಾಲನದಿಯಿಂದೇಳು ಶ್ರೀದೇವಿ ಬಂದಾಳೆ॥ ಕಾಲನದಿಯಿಂದೇಳು ಭೂದೇವಿ ಬಂದಾಳೆ। ಸಾಲ ಮಂಚ ಗಳಿಂದಲಿ ॥ ೫ ॥ ನಾಭಿಕಮಲದಿ ಜನಿಸಿದ ಬ್ರಹ್ಮ ಬಂದಾನೆ। ಗಂಭೀರ ಗಾಯನದ ನಾರದನು ಬಂದಾನೆ ॥ ರಂಭೆ ಮೇನಕೆ ಮೊದಲು ನರ್ತ ನದಿ ಐಥಾರೆ । ಶಂಬರಾರಿಪಿತನೆ ಏಳೊ ॥ ೬ ॥ ರಾಜಸೂಯವ ಕೇಳೆ ವಾಯುಸುತ ಬಂದಾನೆ। ಅರ್ಜುನನು ರಥಹೂಡಬೇಕೆಂದು ನಿಂದಾನೆ॥ ಸಾಜ ಧರ್ಮಜ ಅಗ್ರಪೂಜೆ ಮಾಡುವೆನೆಂದು । ಮೂಜಿಯನೆ ಪಿಡಿದು ಕೊಂಡು ॥ ೭ ॥ ಉರಿಹಸ್ತನಟ್ಟಿದರೆ ಹರ ಓಡಿಬಂದಾನೆ । ಗಿರಿಜೆ ವರ ವನು ಬೇಡೆ ಬಂದು ಇದ್ದಾಳೆ ॥ ಪಾರಿಜಾತವು ಕೊಂಡು ಸುರರಾಜ ಬಂದಾನೆ । ಗರುಡ ವಾಹನಕಾಗಿ ॥ ೮ ॥ ಸತ್ಯನಾಥ ನೀನೇಳು ಸತ್ಯ ಭಾಮೆ ಬಂದಾಳೆ । ಮತಿವಂತ ನೀನೇಳು ಜಾಂಬವತಿ ಬಂದಾಳೆ॥ ಗತಿವಂತ ನೀನೇಳು ಶ್ರೀತುಲಸಿ ಬಂದಾಳೇ। ಕಾಂತ ಸೇವೆಯು ಮಾ ಡಲು ॥ ೯ ॥ ದೇವ ನಿಮ್ಮಂಘ್ರಿ ಪೂಜೆಯು ಮಾಡಬೇಕೆಂದು। ಕಾವೇರಿ ಕೃಷ್ಣ ಗೌತಮಿ ಗಂಗೆ ಮಲಾಪಹರಿ ॥ ಸಾವಧಾನದಿ ಯಮುನೆ ತುಂಗೆ ಸರಸ್ವತಿ । ಭೀಮರಥಿ ನೇತ್ರಾವತಿಯು ॥ ೧೦ ॥ ಮರಿತ ಕಲಿ ಕರ್ಮವನು ತ್ವರಿತದಲಿ ಕೆಡಿಸುವನು। ಮರಿತಾರಿ ಮೇಲಗಿರಿ ಶಿಖರದಲಿ ನಿಂತಿಹನು । ಪುರಂದರವಿಠಲರಾಯ ನೀ ಬೆಳಗಾಯಿತೇಳಯ್ಯ ॥ ೧೧ ॥

## ೧೪೨. ರಾಗ ಸೌರಾಷ್ಟ್ರ, ತ್ರಿಪುಟತಾಳ.

ಕಮಲಕೋಮಲ ಕರತಲಲಾಲಿತ ಪಾದಪಲ್ಲವ ನೀ ದಾರೈ ಕೃಷ್ಣಾ । ಕಾಮಿನಿ ಭಾಮಿನಿರೂಪದ ಚಂದವ ನೋಡಬಂದೆನೇ ಭಾಮೇ ನಾನು ॥ ॥ ೧ ॥ ನಂದನಂದನ ಯದುಕುಲವಂದ್ಯನೆ ಇಂದುವದನ ನೀ ದಾರೈ ಕೃಷ್ಣಾ । ಮಂಜುಳಭಾಷಿಣಿ ಕುರುವಕಗಂಧಿನಿ ಕಂಜನಾಭನೆ ಬಾಲೇ ನಾನು ॥ ೨ ॥ ಉದಧಿಶಯನ ನೀ ನವನೀತ ಕದ್ದವ ಜಾರ ಚೋರ ನೀ ದಾರೈ ಕೃಷ್ಣಾ । ಕಾಮಿನಿ ಸುಂದರಿ ನೀರಜಲೋಚನೆ ಚೋರನಲ್ಲವೇ

ಬಾಲೇ ನಾನು ॥ ೩ ॥ ಮಂದರಧರನೆ ಪರಿಮಳ ಚನ್ನನೆ ಕಂಬುಕಂಧರ ನೀ ದಾರ್‍ಯೆ ಕೃಷ್ಣಾ । ಚಂಚಲಲೋಚನೆ ಕುಟಿಲಕುಂತಲೆ ಕೋಮಲಾಂಗನೆ ಭಾಮೇ ನಾನು ॥ ೪ ॥ ಕಮಲಾರಮಣ ಕಲುಷನಿವಾರಣ ನಿಷ್ಕಾಭರಣ ನೀ ದಾರ್‍ಯೆ ಕೃಷ್ಣಾ । ಕಾಮುಕಕಾಮಿನಿ ಚಂಪಕಗಂಧಿನಿ ಪುರಂದರವಿಠಲನೆ ಬಾಲೇ ನಾನು ॥ ೫ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ಭಗವದ್ಗೀತಾಸಾರ.

### ೧೪೧. ಶ್ಲೋಕ.

ಭಗವಾನುವಾಚ ॥ ನಾಭಿಮೂಲೇ ಸ್ಥಿತಂ ಪದ್ಮಂ ನಾಭ್ಯಂತೇದಶಾಂಗುಲಂ । ಕೋಮಲಂ ತಸ್ಯ ತಂ ನಾಳಂ ನಿಮ್ನಪದ್ಮಮಧೋಮುಖಂ ॥ ೧ ॥ ಕದಳೀಪುಷ್ಪಸಂಕಾಶಂ ಚಂದ್ರಕಾಂತಿಸಮಪ್ರಭಂ । ವಿಶಾಲದಳಸಂಪೂರ್ಣಂ ಚಾರುಹಾಸಸುನಿರ್ಮಲಂ । ಪದ್ಮಕಿಂಜಲ್ಕಸದೃಶಂ ತಪ್ತಕಾಂಚನಸನ್ನಿಭಂ ॥ ೨ ॥

### ರಾಗ ಸಾವೇರಿ, ಝಂಪೆತಾಳ.

ಹೃದಯಕಮಲಷ್ಟದಳ ಹೃಷೀಕೇಶ ನಾರಾಯಣ ಹಂಸಗಮನ । ತುದಿತುದಿಲು ಕೇಸರದಿ ಧುಮಿಕಿ ನಾಳಕರ್ಣಿಕೆವಲ್ಯ ॥ ಪಲ್ಲ ॥ ಕಮಲಮೂಲನಾಭಿಗೆ ಹೃತ್ಕಮಲಕೆ ಹತ್ತಂಗುಲ । ಕಮಲ ಕೋಮಲನಾಳ ಕಮಲ ಅಧೋಮುಖ ॥ ಕಮಲ ಕದಳೀಪುಷ್ಪದಂತೆ ಕಮಲ ಚಂದ್ರಕಾಂತಿಯಂತೆ । ಕಮಲವಿಶಾಲಪೂರ್ಣ ದಶದಿಕ್ಕು ಕಮಲ ಸ್ವರ್ಣದಂತಿಹೋದು ॥ ೧ ॥

### ಶ್ಲೋಕ.

ಹೃದಿ ಸ್ಥಿತಂ ಪಂಕಜಮಷ್ಟಪತ್ರಂ ಸಕೇಸರಂ ಕರ್ಣಿಕಪದ್ಮ(ಪತ್ರ)ನಾಳಂ । ಅಂಗುಷ್ಠಮಾತ್ರಂ ಮುನಯೋ ವದಂತಿ ಧ್ಯಾಯೇಚ್ಚ ವಿಷ್ಣುಂ ಪುರುಷಂ ಪುರಾಣಂ ॥ ೧ ॥ ಅಷ್ಟಪತ್ರಂ ತು ಹೃತ್ಪದ್ಮಂ

ಡ್ವಾತ್ರಿಂಶತ್ಕೇಸರಾನ್ವಿತಂ। ತಸ್ಯ ಮಧ್ಯೇ ಸ್ಥಿತಂ ದೇವಂ ಇಂದ್ರಾದ್ಯೈಶ್ಚ ಸುಸೇವಿತಂ ॥ ೨ ॥

ರಾಗ ಸಾವೇರಿ, ಝಂಪೆತಾಳ.

ಅಷ್ಟದಳ ಹೃತ್ಕಮಲ ಅದಕ್ಕೆ ಮೂವತ್ತೆರಡು ಕೇಸರ। ಅಷ್ಟರಲ್ಲಿ ಕರ್ಣಿಕೆನಾಳ ಅರಸಿ ಶ್ರೀಭೂದೇವಿಯು ॥ ಅಷ್ಟಬಾಹು ಅಷ್ಟಾಯುಧ ಅಂಗುಷ್ಠಮಾತ್ರ ವಿಷ್ಣು । ಅಷ್ಟದಿಕ್ಪಾಲಕರಿರಲು ಅಲ್ಲಿ ಬ್ರಹ್ಮಾದಿಗಳಿಂದ ॥ ೨ ॥

ಶ್ಲೋಕ.

ಕೃತೇ ಶ್ವೇತಂ ಹರಿಂ ವಿದ್ಯಾತ್ ತ್ರೇತಾಯಾಂ ರಕ್ತವರ್ಣಕಂ। ದ್ವಾಪರೇ ಪೀತವರ್ಣಂ ತು ಕೃಷ್ಣವರ್ಣಂ ಕಲೌಯುಗೇ ॥ ಶಂಖಚಕ್ರ ಗದಾಪದ್ಮಂ ಮುಸಲಂ ಖಡ್ಗಮೇವ ಚ । ಧನುಸ್ಸಹಿತಬಾಣಂ ಚ ಅಷ್ಟಬಾಹುಧರಂ ಹರಿಂ ॥ ೩ ॥

ರಾಗ ಸಾವೇರಿ, ಝಂಪೆತಾಳ.

ಶ್ವೇತವರ್ಣ ಕೃತಯುಗದಿ ತ್ರೇತಾಯುಗದಿ ರಕ್ತವರ್ಣ । ಪೀತವರ್ಣ ದ್ವಾಪರದಿ ಪ್ರೀತಿ ಕೃಷ್ಣವರ್ಣ ಕಲಿಯುಗದಿ ॥ ಧಾತ ಧನುವೇಣು ಬಾಣ ಶಂಖ ಚಕ್ರ ಗದ ಪದ್ಮ। ಆತುರ್ಯ ಖಡ್ಗ ಮುಸಲಾಖಿಂದ ಅಷ್ಟಬಾಹುಗಳಿಂದ ಧರಿಸಿ ॥ ೩ ॥

ಶ್ಲೋಕ.

ಪೂರ್ವೇದಳೇ ಪುಣ್ಯಬುದ್ಧಿರಾಗ್ನೇ ನಿದ್ರಾಲಸಾಧಿಕಂ। ಯಾಮ್ಯೇ ದಳೇ ಕ್ರೂರಬುದ್ಧಿರ್ನೈಋತ್ಯಾಂ ಪಾಪಬುದ್ಧಿಕೃತ್ ॥ ವಾರುಣೇ ಚ ಪರಿಕ್ರೀಡಾ ವಾಯವ್ಯಾಂ ಗಮನಾಗಮಂ । ಕೌಬೇರ್ಯಾಂ ರತಿಬುದ್ಧಿಃ ಸ್ಯಾತ್ ಈಶಾನ್ಯೇ ದ್ರವ್ಯದಾನಕೃತ್ ॥ ೪ ॥

ರಾಗ ಕಲ್ಯಾಣಿ, ಛಾಪುತಾಳ.

ಪೂರ್ವದಳದಿ ವಿಷ್ಣು ಬರಲು ಪುಣ್ಯಮಯದಿ ಜೀವನಿರ್ವಾ। ಆರೂಢ ಆಗ್ನೇಯದಳದಿ ಆರೋಗಣೆಗೆ ಮನಸೀವ । ತೋರುತಿಹ

ಯಮದಿಕ್ಕಿಲಿ ತುಂಬಿದ ಕ್ರೋಧವು ಬಿಗಿಯೆ । ಪಾರದಾದೆ ನೈಋತ್ಯ ಪಾಪಕೃತ್ಯ । ವರುಣದಿಕ್ಕಿಲಿ ವಿನೋದ ವಾಯುವ್ಯದಿ ಗಮನಾಗಮ । ಕುರುಹು ಕುಬೇರದಿಕ್ಕಿಲಿ ಕೊಡುವರತಿ ಬುದ್ಧಿಯು । ತೆರಳಿಬಂದು ಈಶಾನ್ಯದಿ ದ್ರವ್ಯದಾನ ಮಾಡಿಸುವ । ನೆರದು ದಿಕ್ಪಾಲಕರ ಕೂಡಿ ನಿಂತು ನಿಂತು ಬರುವ ॥ ೪ ॥

## ಶ್ಲೋಕ.

ಮಧ್ಯೇ ವೈರಾಗ್ಯಬುದ್ಧಿಃ ಸ್ಯಾತ್ ಜಾಗ್ರದ್ಬುದ್ಧಿಸ್ತು ಕೇಸರೇ । ಸ್ವಪ್ನಾವಸ್ಥಾ ಕರ್ಣಿಕಾಯಾಂ ಅಂಗೈಷ್ಟೈವ ಸುಷುಪ್ತಿಕೃತ್ ॥ ೫ ॥

## ರಾಗ ಕಲ್ಯಾಣಿ, ಅಟತಾಳ.

ಜೀವಕೀವ ವೈರಾಗ್ಯ ಜಗದೀಶ ಮಧ್ಯಯಿಮ । ಮೂವತ್ತೆರಡು ಕೇಸರದಿ ಮುಕುಂದ ಬರಲು ಜಾಗ್ರತೆ ಭರವಿತ್ತು ಕರ್ಣಿಕೆಯುಲಿ ಬಂದು ಸ್ವಪ್ನಂಗಳು ತೋರಿ । ಹುವು ಕರ್ಣಿಕೆ ಬಿಟ್ಟು ಮಣಿಗಳ ಪೊಂದಿ ಸುಷುಪ್ತಿಯಿಹಾವ ॥ ೫ ॥

## ಶ್ಲೋಕ.

ತಸ್ಯ ಮಧ್ಯೇ ಗತೋ ಭಾನುಃ ಭಾನುಮಧ್ಯೇ ಗತಃ ಶಶೀ । ಶಶಿ ಮಧ್ಯೇ ಗತೋ ವಹ್ನಿಃ ವಹ್ನಿಮಧ್ಯೇ ಗತಾ ಪ್ರಭಾ । ಪ್ರಭಾಮಧ್ಯೇ ಗತಂ ಪೀಠಂ ನಾನಾರತ್ನೋಪಶೋಭಿತಂ । ಅನೇಕರತ್ನಸಂಕೀರ್ಣಂ ಜ್ವಲನಾರ್ಕಸಮಪ್ರಭಂ । ಸಹಸ್ರಫಣಸಂಯುಕ್ತಂ ಮಧ್ಯೇ ದೇವಃ ಸ್ಥಿತೋ ಭವೇತ್ ॥ ೬ ॥

## ರಾಗ ಭೈರವಿ, ಛಾಪುತಾಳ.

ಮಧ್ಯಕಮಲದಿ ಸೂರ್ಯ ಮಧ್ಯಸೂರ್ಯನಲ್ಲಿ ಚಂದ್ರ । ಮಧ್ಯ ಚಂದ್ರನಲಿ ಅಗ್ನಿ ಮಧ್ಯೆನೆಲೆ ತೇರು ಶೃಂಗಾರ ॥ ಮಧ್ಯಜಗಲಿ ಕಲ್ಪವೃಕ್ಷ ಮಧ್ಯಮಂಟಪ ಸ್ವರ್ಣಪೀಠ । ಮಧ್ಯಪೀಠ ಸಹಸ್ರಫಣಿ ಮಧ್ಯ ಶ್ರೀಭೂ ನಾರಾಯಣ ॥ ೬ ॥

## ಶ್ಲೋಕ.

ಆಗ್ನೇಯಪುರಾಣಂ ॥ ಗುಹ್ಯಾದ್ಗುಹ್ಯತಮಂ ಪುಣ್ಯಂ ಸಪ್ರಕಾಶಂ ಕಥಂಚನ । ಹೃದಯೇಽಷ್ಟದಳಂ ಪದ್ಮಂ ಕರ್ಣಿಕಾಮಧ್ಯಶೋಭಿತಂ । ಓಂಕಾರನಾದವಿಲಸದ್ವೇದಗ್ರಂಥಿಸಮಪ್ರಭಂ । ತನ್ಮಧ್ಯೇ ನವರತ್ನಾಢ್ಯಂ ತಪ್ತಹಾಟಕಸನ್ನಿಭಂ । ವಿದ್ರುಮಸ್ಫಟಿಕಾಕಾರಂ ಶತಸ್ತಂಭಸಮನ್ವಿತಂ । ಕೋಟಿಸೂರ್ಯಪ್ರತೀಕಾಶಂ ವಿಮಾನೇನ ವಿರಾಜಿತಂ । ಮುಕ್ತಾದಾಮವಿತಾನಾಢ್ಯಂ ಛತ್ರಧ್ವಜಪತಾಕಿನಂ ॥ ೭ ॥

## ರಾಗ ಭೈರವಿ, ಛಾಪುತಾಳ.

ಹವಳದ ಸ್ಫಟಿಕಕಂಬ ನೂರು ಹಾಟಕ ನವರತ್ನ ತೇರು । ಹವಣೆ ನಾಲ್ಕುಮೂಲೆ ಜಗಲಿ ಹೊಳೆವ ರತ್ನದಲ್ಲಿಹದು ॥ ವಿವಿಧ ಮುತ್ತಿನ ಗೊಂಚಲುಗಳು ಛತ್ರ ಧ್ವಜ ಪತಾಕಂಗಳು । ರವಿಕೋಟಿ ಕಾಂತಿಯಿಂದ ರಥವು ಹೊಳೆವುತಿರಲು ॥ ೭ ॥

## ಶ್ಲೋಕ.

ಮಲ್ಲಿಕಾಕುಂದಮಂದಾರೈಃ ಕೇತಕ್ಯೈಶ್ಚಂಪಕಾದಿಭಿಃ । ಅನ್ಯೈಶ್ಚ ಗಂಧವತ್ಪುಷ್ಪೈಃ ಸಮಂತಾದಿವ ಕರ್ಣಿಕಂ । ಮಹಾಪ್ಲಾಷ್ಯತಮಂ ಪುಣ್ಯಂ ಕಲ್ಪವೃಕ್ಷಾಂತರೇ ಸ್ಥಿತಂ । ಏತನ್ಮಂಟಪಮಧ್ಯಸ್ಥಂ ಸ್ವರ್ಣಪೀಠೋಪರಿ ಸ್ಥಿತಂ । ಸಿಂಹಾಸನಸಮಾಸೀನಂ ಕೋಟಿಸೂರ್ಯಸಮಪ್ರಭಂ । ವಿಷ್ಣುಂ ಚತುರ್ಭುಜಂ ಲಕ್ಷ್ಮೀಭೂಮಿಭ್ಯಾಂ ಪಾರ್ಶ್ವಶೋಭಿತಂ ॥ ೮ ॥

## ರಾಗ ಭೈರವಿ.

ಮಲ್ಲಿಗೆ ಕುಂದಮಂದಾರ ಮರುಗಾ ಕೇತಕಿ ಸಂಪಿಗೆ । ಅಲ್ಲಿ ಮಂಟಪ ಶೃಂಗಾರ ಅನೇಕ ಹುವಿಲಿ ಮಂದಾರಾ ಸಲುವಾ ॥ ಕಲ್ಪವೃಕ್ಷದ ಕೆಳಗೆ ಸ್ವರ್ಣಪೀಠ ಸಿಂಹಾಸನ । ಅಲ್ಲಿ ಕೋಟಿಸೂರ್ಯಪ್ರಕಾಶದಿಂದಿರುವ ವಿಷ್ಣು ಚತುರ್ಭುಜದಿ ॥ ೮ ॥

### ಶ್ಲೋಕ.

ಅನೇಕ(ಕೋಟಿ)ಸೂರ್ಯಪ್ರಕಾಶಂ ಮಕುಟಾಟೋಪಮಸ್ತಕಂ। ಕಟಿಸೂತ್ರ ಬ್ರಹ್ಮಸೂತ್ರ ನೂಪುರೇಣ ವಿರಾಜಿತಂ । ಶ್ರೀವತ್ಸವನಮಾಲಾಢ್ಯಂ ತುಲಸೀದಾಮಭೂಷಿತಂ । ವರದಾಭಯಹಸ್ತಾಭ್ಯಾಂ ಶಂಖಚಕ್ರಪುರಸ್ಸರಂ । ಪೀತಾಂಬರಧರಂ ದೇವಂ ಪ್ರಸನ್ನವದನಂ ಶುಭಂ । ಮನೋಹರಂ ದಯಾಮೂರ್ತಿಂ ಮಂದಹಾಸಮುಖಾಂಬುಜಂ ॥ ೯ ॥

### ರಾಗ ಅಸಾವೇರಿ.

ಅನೇಕಕೋಟಿಸೂರ್ಯಪ್ರಕಾಶ ಅಲ್ಲಿ ಮಕುಟಟೋಪಾ ಮಸ್ತಕ। ವನಜಾಕ್ಷ ಅಚ್ಯುತಗೆ ಶ್ರೀವತ್ಸ ಕೌಸ್ತುಭ ಕೇಯೂರ ॥ ಕನಕಾಂಬರಹಾರ ಕುಂಡಲ ಕಟಿಸೂತ್ರ ಯಜ್ಞೋಪವೀತ । ವನಜ ಗಂಧ ಪುಷ್ಪ ತುಲಸಿ ವೈಜಯಂತಿ ವನಮಾಲೆ ಧರಿಸಿ ॥ ೯ ॥

### ಶ್ಲೋಕ.

ಅನೇಕದಿವ್ಯಾಭರಣೈಃ ಕರಕಂಕಣಶೋಭಿತಂ । ದಿವ್ಯಶ್ರೀವರಯುಗ್ಮಾಭ್ಯಾಂ ಚಾಮರಾಭ್ಯಾಂ ಸುಸೇವಿತಂ ॥ ಮಾಧವಂ ಪರಮಾತ್ಮಾನಂ ಭಕ್ತವತ್ಸಲಮೀಶ್ವರಂ । ಧ್ಯಾತ್ವೈವ ಹೃದಿ ವಾ ಸೂರ್ಯಮಂಡಲಾಂತರ್ಗತಂ ಜಪೇತ್ ॥ ೧೦ ॥

### ರಾಗ ಸಾವೇರಿ.

ಅನೇಕ ದಿವ್ಯಾಭರಣದಿಂದ ಅಂಗನೇರು ತನುಲಂಕೃತಾದಿ । ವನಜನಾಭಗೆ ಕಡಗ ಕಂಕಣ ವರಾಭಯಹಸ್ತದಿ ॥ ಕನಕಾಂಗ ಕಸ್ತೂರಿನಾಮ ಕರುಣಿ ಪ್ರಸನ್ನವದನ ಶುಭ । ಮನೋಹರ ದಯಾಮೂರ್ತಿ ಮಂದಹಾಸ ಮುಖಾಂಬುಜದಿ ॥ ೧೦ ॥

### ಶ್ಲೋಕ.

ಅಣಿಮಾದ್ಯೈರ್ಮೂರ್ತಿಮದ್ಭಿಃ ಅಷ್ಟೈಶ್ವರ್ಯಮುಪಾಸಿತಂ । ಬದ್ಧಾಂಜಲಿಪುಟೈಃ ಭಕ್ತೈಃ ಬ್ರಹ್ಮರುದ್ರಾದಿಭಿಃ ಸುರೈಃ ॥ ಗಾಯದ್ಭಿಃ

ನಾರದಾದ್ಯೈಶ್ಚ ಸನಕಾದ್ಯೈಃ ಸುಸೇವಿತಂ । ನುತಂ ಪರಮಕಲ್ಯಾಣಂ ಸೂತಮಾಗಧಬಂದಿಭಿಃ ॥ ೧೧ ॥

ರಾಗ—

ಅಣಿಮಾದಿ ಅಷ್ಟೈಶ್ವರ್ಯ ಆದಿಮೂರ್ತಿ ಆರಾಧಿಸಲು । ಅಣಿಯಾಗಿ ಬ್ರಹ್ಮರುದ್ರರು ಅಮರರಂಜಲಿ ಮಾಡಲು । ಕಣಿಯಾಗಿ ನಾರದಾದ್ಯರು ಕೈಮುಗಿದು ಗಾನವನು ಮಾಡಲು । ಕುಣಿಯಲು ಊರ್ವಶಿ ರಂಭೆ ಮೇನಕಿ ಕೋಮಲೆ ತಿಲೋತ್ತಮೆ ॥ ಸನಕಾದಿ ಯೋಗಿಗಳು ಸ್ತೋತ್ರಗಳು ಮಾಡಲು । ಮನಮೆಚ್ಚಿ ವಂದಿಸುತ ಮಾಗಧರು ಹೊಗಳಲು । ಅನೇಕ ದಿವ್ಯಾಭರಣಾದಿ ಕೈಕಂಕಣಾದಿ ಉಭಯ ಪಾರ್ಶ್ವ । ಕನಕಕಾಮಿನಿ ಛತ್ರಚಾಮರ ಕಾಂತೇರಿಬ್ಬರು ಡಾಳಿಸಲು ಆಗ ॥ ೧೧ ॥

ಶ್ಲೋಕ.

ಅರ್ಜುನ ಉವಾಚ ॥ ದುರ್ವಿಜ್ಞೇಯೋ ದುರಾರಾಧ್ಯೈಃ ದುಷ್ಪ್ರಾಗಮ್ಯೋ ಜನಾರ್ದನಃ । ಅಧೋಮುಖಮಧೋಭೂತ್ವಾ ಹೃದಯಂ ತೇನ ಗಚ್ಛತಿ ॥ ೧೨ ॥

ರಾಗ—

ದುರ್ವಿಜ್ಞೇಯ ದುರಾರಾಧ್ಯಾ ದುಷ್ಪ್ರಾಗಮ್ಯಾ ಜನಾರ್ದನ ನಿರ್ವಿಘ್ನಾದಿ ಅಧೋಮುಖವದ ವಿರಜವ ನಿಲಿಸಿ ॥ ಉರ್ವಿಯೊಳು ಮಾನಸಪೂಜೆಗೆ ಉಪಾಸ್ತಿಗರ್ಜುನ ಕೇಳಲು । ಸರ್ವರಂತರ್ಯಾಮಿ ಕೃಷ್ಣಸ್ವಾಮಿ ಭಾವವ ಪೇಳಿದನು ॥ ೧೨ ॥

ಶ್ಲೋಕ.

ಶ್ರೀಭಗವಾನುವಾಚ ॥ ಅಧೋಮುಖಂ ತು ಹೃತ್ಪದ್ಮಕೋಶಂ ವಿಕಸಿತಂ ಸ್ಮೃತಂ । ಪುನಃ ಪಶ್ಚಾದ್ಭವೇತ್ಪದ್ಮಂ ಸರ್ವಗಾತ್ರಶುಭಾಪಹಂ । ಆವಾಹನಾಸನಂ ಪಾದ್ಯಂ ಅರ್ಘ್ಯಮಾಚಮನೀಯಕಂ ॥ ೧೩ ॥

ರಾಗ—

ಭಾರಪ್ರಣವಾವ್ಯಾಹೃತಿ ವಾಯುಬದ್ಧದಲ್ಲಿ ಹೃತ್ಕಮಲ । ನೋಪಿಲ್ಲದೆ ಅಧೋಮುಖವನು ಕೇಸರ ॥ ಉನ್ನತದರಳುವದು ಆವಾಹನೆ ಆಸನವು ಅಂತರಾದಿ ಪಾದ್ಯವು । ದೇವಗೆ ಅರ್ಘ್ಯಾಚಮನಾದಿಗಳು ಉಪಚರಿಸು ನೀನು ॥ ೧೩ ॥

ಶ್ಲೋಕ.

ಸ್ನಾನವಸ್ತ್ರೋಪವೀತಂಚಾಚಮನಂ ಚೋತ್ತರೀಯಕಂ । ಆಚಮ್ಯಂ ಗಂಧಪುಷ್ಪೇ ಚ ಧೂಪದೀಪೌ ಪ್ರಕಲ್ಪಯೇತ್ ॥ ನೈವೇದ್ಯಂ ಪುನರಾಚಮ್ಯ ತಾಂಬೂಲಂ ಚ ನಿವೇದಯೇತ್ । ಪ್ರದಕ್ಷಿಣನಮಸ್ಕಾರಂ ಕೃತ್ವಾ ಸ್ಥಿತ್ವಾ ಸಮರ್ಪಯೇತ್ ॥ ೧೪ ॥

ರಾಗ ಪಂತುವರಾಳಿ.

ಅಭಿಷೇಕಂಗಳು ವಸ್ತ್ರ ಅರ್ಪಿಸು ಯಜ್ಞೋಪವೀತ । ಉಭಯಾಚಮನೋತ್ತರೀಯ ಒಪ್ಪು ಮತ್ತೊಂದಾಚಮನೆ ॥ ವಿಭುವಿಗೆ ಗಂಧ ಪುಷ್ಪವಿಟ್ಟು ಧೂಪ ದೀಪ ನೈವೇದ್ಯ । ಪ್ರಭುವಿಗಾಚಮನ ತಾಂಬೂಲ ಪ್ರದಕ್ಷಿಣೆ ನಮಸ್ಕಾರ ॥ ೧೪ ॥

ಶ್ಲೋಕ.

ತೈಲಾಜ್ಯವರ್ತಿಸಂಯುಕ್ತಂ ಮಧ್ಯಾಪ್ನೇ ಜ್ಯೋತಿರೂಪಕಂ । ತಾದೃಶಂ ಪರಮಾತ್ಮಾನಂ ಸ್ಮರೇತ್ಸಾರ್ಥ ಮನಸ್ಯಮುಂ ॥ ಸದಸೂಕ್ಷ್ಮಂ ನಿರ್ವಿಕಾರಂ ಶ್ರೀನಿವಾಸಂ ನಿರಂಜನಂ । ಅಪ್ರಮೇಯಮಜಂ ದೇವಂ ತನ್ಮಧ್ಯೇ ಪುರುಷೋತ್ತಮಂ ॥ ೧೫ ॥

ರಾಗ ಪಂತುವರಾಳಿ.

ತವಕದಲಿ ಸ್ತುತಿಸಿ ತೈಲಾಜ್ಯ ಬತ್ತಿಯಿಂದ । ಧವಣಿಸಿದ ಜ್ಯೋತಿಯಂತೆ ಹರಿಯ ಮೂರುತಿ ಕಾಣು ॥ ಪವನೆ ತಾಸಿಂತು ಧ್ಯಾನಿಸಲು ಪರಮಾತ್ಮ ಸುಧಸೂಕ್ಷ್ಮ ಶ್ರೀನಿವಾಸ । ನಿರ್ವಿಕಾರ ನಿರಂಜನಪ್ರಮೇಯ ॥ ೧೫ ॥

## ಶ್ಲೋಕ.

ಪಾದಾಧ ರತಳಂ ವಿಂದ್ಯಾತ್ ಪಾದೋರ್ಧ್ವಂ ವಿತಳಂ ಭವೇತ್ । ಸುತಳಂ ಜಂಘದೇಶೇ ತು ಜಾನುದೇಶೇ ರಸಾತಲಂ ॥ ತಳಾತಳಂ ಊರುದೇಶೇ ಗುಹ್ಯದೇಶೇ ಮಹಾತಳಂ । ಪಾತಾಳಂ ಕಟಿದೇಶೇ ತು ಸಪ್ತಮಂ ಪರಿಕಲ್ಪಿತಂ ॥ ೧೬ ॥

## ರಾಗ ಪಂತುವರಾಳಿ.

ಅತಳದಲ್ಲಿ ಪಾದವಿಹುದು ಆ ಪದೋರ್ಧ್ವ ವಿತಳದಲ್ಲಿ । ಸುತಳದಲ್ಲಿ ಜಂಘೆಗಳು ಸೋದ್ಯಜಾನು ರಸಾತಳದಿ ॥ ತಳಾತಳದಿ ತೊಡೆಇಹುದು ಮಹಾತಳದಿ ಗುಹ್ಯವಿಹುದು । ಪ್ರತಿಯಿಲ್ಲದ ಕಟಿಪದವಿ ಪಾತಾಳವಿಹುದು ॥ ೧೬ ॥

## ಶ್ಲೋಕ.

ಭೂರ್ಲೋಕಂ ನಾಭಿಮಧ್ಯೇ ತು ಭುವರ್ಲೋಕಂ ತು ಕುಕ್ಷಿಕೇ । ವಕ್ಷಸ್ಥಳೇ ಸುವರ್ಲೋಕಂ ಮಹರ್ಲೋಕಂ ತು ಕಕ್ಷಕೇ ॥ ಜನೋಲೋಕಂ ಕಂಠದೇಶೇ ತಪೋಲೋಕಂ ಲಲಾಟಕೇ । ಸತ್ಯಲೋಕಂ ತು ಮೂರ್ಧ್ನಿಸ್ತಿ ಭುವನಾನಿ ಚತುರ್ದಶ ॥ ೧೭ ॥

## ರಾಗ—

ಭೂರ್ಲೋಕ ನಾಭಿಮಧ್ಯ ಭುವರ್ಲೋಕದಲಿ ಕುಕ್ಷಿ । ಮೇಲೆ ಸುವರ್ಲೋಕವಲಿ ವೃದುಹೃದಯ ಶ್ರೀವತ್ಸ । ಶ್ರೀಲೋಲನ ಕಕ್ಷಗಳಲಿ ಸೇರಿಹುದು ಮಹರ್ಲೋಕ । ಮೇಲೆ ಕೌಸ್ತುಭ ಜನೋಲೋಕವುತ್ತ ಕೊರಳಲಿಹುದು ॥ ತಪೋಲೋಕದಿ ಲಲಾಟ ತಲೆ ಸತ್ಯಲೋಕದಿ । ವಿಪರೀತ ವಿರಾಟರೂಪ ವಿಶ್ವತೇಜಸ ಪ್ರಾಜ್ಞ ತುರ್ಯ । ಉಪೇಂದ್ರ ಎಪ್ಪತ್ತೆರಡು ಸಾವಿರ ಉಪನಾಡಿಯಲಿ । ಕಪಟನಾಟಕ ಸೂತ್ರಧಾರಿ ಪುರಂದರವಿಠಲ ॥ ೧೭ ॥ ಶ್ರೀ ॥

## ೧೪೨. ಉದಯರಾಗ, ಝಂಪೆತಾಳ.

ಏಳಯ್ಯ ಬೆಳಗಾಯಿತು ॥ ಪಲ್ಲ ॥ ಏಳು ಹೃಷೀಕೇಶ ಏಳು ರವಿಶಶಿ ವಂದ್ಯ । ಏಳು ಪಶುಗಳ ಕಾಯ್ದು ಪಾಲಿಸಿದೆ ಗೋಕುಲವ । ಏಳು ಯಶೋದೆಸುತನೆ ಏಳು ಭೂಪತಿರಮಣ ॥ ಅನುಪಲ್ಲ ॥ ಪಚ್ಚೆ ಮುಡಿ ವಾಳಗಳು ಅಚ್ಚ ಶಾವಂತಿಗೆಯು । ಬಿಚ್ಚನೆ ಜಾಜಿ ಸಂಪಿಗೆಯು ಪುನ್ನಾಗ ಕುಕ್ಷಿಯೊಳು ಈರೇಳು ಭುವನವನು ಸಲಹುವಿ । ಅಚ್ಚ ಜಾಣೆಯರು ಶ್ರೀಗಂಧ ಪುನುಗು ಕಸ್ತೂರಿ ಬಿಚ್ಚನೆ ಬೆಳೆಯಲೆಯು ಪಿಡಿದು ನಿಂತಿದ್ದಾರೆ । ಮುಚ್ಚುತಿವೆ ತಾರೆಗಳು ಹೆಚ್ಚುತದೆ ರವಿಕಿರಣ ಅಚ್ಚುತನೆ ಉಪ್ಪವಡಿಸ ॥ ೧ ॥ ಚನ್ನೆಯರು ಚದುರ ಸಂಪನ್ನೆಯರು ಪನ್ನೀರು । ಪೊನ್ನ ತಂಬಿಗೆಗಳಲ್ಲಿ ಪಿಡಿದು ನಿಂತಿದ್ದಾರೆ । ಮುನ್ನಣೆಯ ನಾರದರು ಮೊದಲಾದ ಸುರನಿಕರ ನಿನ್ನ ಮಹಿಮೆಯ ಪಾಡಿ ನಲಿಯು ತಿರೆ। ಇನ್ನು ಉದಯದ ಸಮಯ ಸಿರಿಯರಸ ಚನ್ನಿಗನೆ ಉಪ್ಪವಡಿಸ ॥ ॥ ೨ ॥ ದೇವದುಂದುಭಿ ಮೊಳಗೆ ದೇವಕನ್ನೆಯರು ದೇವಾಂಗವಸ್ತ್ರವನು ಪಿಡಿದು ನಿಂತಿದ್ದಾರೆ । ದೇವದೇವೇಶ ನಿಮ್ಮ ವಾಲಗದ ಸಂಭ್ರಮಕೆ ದೇವಾದಿದೇವತೆಗಳೆಲ್ಲ ನೆರೆದು । ದೇವ ಪ್ರಹ್ಲಾದ ಬಲಿ ಮುಖ್ಯರನು ಕ್ಕಾದೆಂಮು ದೇವ ಬ್ರಹ್ಮನ ಪಡೆದ ದೇವಗಂಗೆಯ ಪಿತನೆ । ದೇವದೇವೋತ್ತಮನೆ ದೇವಾದಿದೇವನೇ ದೇವ ಪುರಂದರವಿಠಲನೆ ಉಪ್ಪವಡಿಸ ॥ ೩ ॥ ಶ್ರೀಃ ॥

## ೧೪೩. ರಾಗ ಆನಂದಭೈರವಿ, ತ್ರಿಪುಟತಾಳ.

ಜೋಜೋ ಯಶೋದೆಯ ನಂದ ಮುಕುಂದನೆ । ಜೋಜೋ ಕಂಸಕುಠಾರಿ । ಜೋಜೋ ಮುನಿಗಳ ಹೃದಯಮಂದಿರ । ಜೋಜೋ ಲಕುಮಿಯ ರಮಣ ॥ ಪಲ್ಲ ॥ ಹೊಕ್ಕಳಹೂವಿನ ತಾವರೆಗಣ್ಣಿನ ಇಕ್ಕಿದ್ದ ಮಕರಕುಂಡಲದ । ಜಕ್ಕರಿಸುವ ಕದಪಿನ ಸುಳಿಗುರುಳಿನ ಚಿಕ್ಕಬಾಯಿ ಮುದ್ದುಮೊಗದ ॥ ಸೊಕ್ಕಿದ ಮದಕರಿಯಂದದಿ ನೊಸಲಲಿ ಇಕ್ಕಿದ ಕಸ್ತುರಿತಿಲಕ । ರಕ್ಕಸರೆದೆದಲ್ಲಣ ಮುರವೈರಿಯ ಮಕ್ಕಳ ಮಾಣಿಕ ।

ಜೋಜೋ ॥ ೧ ॥ ಕಣ್ಣು ಬೆಳಗು ಪಸರಿಸಿ ನೋಡುತ ಅರೆಗಣ್ಣು ಮುಚ್ಚಿ ನಸುನಗುತ । ಸಣ್ಣಬೆರಳು ಬಾಯೊಳು ಢವಳಿಸುತ ಪನ್ನಂಗಶಯನ ನಾಟಕದಿ ॥ ನಿನ್ನ ಮಗನ ಮುದ್ದು ನೋಡೆನುತ ಗೋಪಿ ತನ್ನ ಪತಿಗೆ ತೋರಿದಳು । ಚಿನ್ನತನದ ಸೊಬಗಿನ ಖಣಿಯೇ ಹೊಸ ರನ್ನಮುತ್ತಿನ ಬೊಂಬೆ ॥ ಜೋಜೋ ॥ ೨ ॥ ನಿಡಿತೋಳ್ಗಳು ಪಸರಿಸುತಲಿ ಗೋಪಿಯ ತೊಡೆಮೇಲೆ ಮಲಗಿ ಬಾಯದೆರೆಯೆ । ಒಡಲೊಳು ಚತುರ್ದಶಭುವನ ವಿರಲು ಕಂಡು ನಡುನಡುಗಿ ಕಣ್ಣು ಮುಚ್ಚಿದಳು ॥ ತಡೆಯದೆ ಅಡಿಗಳ ನಿಡುತಲಿ ಬಂದು ಮಡದೇರ ಮುಖವ ನೋಡುತ ನಿಂದು । ಕಡು ದಯಾಸಾಗರ ಪುರಂದರವಿಠಲ ಬಿಡದೆ ರಕ್ಷಿಸು ಎನ್ನ ಸಲಹಬೇಕೆಂದು ॥ ಜೋಜೋ ॥ ೩ ॥ ಶ್ರೀಃ ॥

## ೧೪೪. ರಾಗ ಸುರುಟಿ, ಆದಿತಾಳ.

ಮಂಗಳಂ ಜಯ ಮಂಗಳಂ ॥ ಪಲ್ಲ ॥ ಸಾಗರದೊಳಾಡುವ ಮತ್ಸ್ಯನಿಗೆ । ಬೇಗೆಗಿರಿಯ ಬೆನ್ನಲಿ ಪೊತ್ತ ಕೂರ್ಮನಿಗೆ ॥ ವೇಗದಿಂದಲಿ ಭೂಮಿಯ ತಂದ ವರಹಗೆ । ಕೂಗಿದ ಶಿಶು ಪರಿಪಾಲನಿಗೆ ॥ ೧ ॥ ವಾಸವಾನುಜ ಪರಶುವರಾಯುಧ । ದಾಶರಥಿ ರಾಮಚಂದ್ರನಿಗೆ ॥ ಸಾಸಿರಧದಿನಾರು ನೂರೆಂಟು ಹೆಂಗಳ । ಮೋಸಮಾಡಿದ ನಮ್ಮ ಬುದ್ಧನಿಗೆ ॥ ೨ ॥ ವಾಜಿಯನೇರಿದ ಮುಜ್ಜಗದೊಡೆಯಗೆ । ಪೂಜಿತಚರಣ ಸರೋಜನಿಗೆ ॥ ರಾಜಿತ ಪುರಂದರವಿಠಲರಾಯಗೆ । ರಾಜಾಧಿರಾಜ ಸರ್ವೇಶಗೆ ॥ ಮಂಗಳಂ ॥ ೩ ॥ ಶ್ರೀಃ ॥

## ೧೪೫. ರಾಗ ಭೈರವಿ, ಝಾಪುತಾಳ.

ಜಯಮಂಗಳಂ ನಿತ್ಯ ಶುಭಮಂಗಳಂ ॥ ಪಲ್ಲ ॥ ಆಲನಾರಾಯಣಗೆ ಶ್ರೀಲಕ್ಷ್ಮೀ ಅರಸಗೆ । ಕ್ಷೀರಸಾಗರದಲ್ಲಿ ನೆಲಸಿಹಗೆ ॥ ಆಲದೆಲೆಯಲಿ ಮಲಗಿ ಲೋಲನಾಗಿದ್ದಂಥ । ಸಾಕ್ಷಾತು ಪತಿಯ ವೆಂಕಟರಮಣಗೆ ॥ ೧ ॥ ಗೋಕುಲದಲ್ಲಿ ಹುಟ್ಟಿದವಗೆ ಗೋವುಗಳ ಕಾಯ್ದವಗೆ ।

ಗೋಪಾಲ ಶ್ರೀಕೃಷ್ಣ ಯೆನಿಸಿಹಗೆ ॥ ಹದಿನಾಲ್ಕುಲೋಕ ಬಾಯಿಲಿ ತೋರಿದಾತಗೆ । ಸಾಕ್ಷಾತು ಪತಿಯು ವೆಂಕಟರಮಣಗೆ ॥ ೨ ॥ ದಶರಥ ರಾಮನಿಗೆ ಅಸುರಸಂಹಾರಿಗೆ । ಹೆಸರು ಸೀತಾಪತಿ ಯೆನಿಸಿಹಗೆ ॥ ಕುಶಲದಲಿ ಸೇತುವೆಯನು ಕಟ್ಟಿ ಮೆರೆದಾತನಿಗೆ । ಸಾಕ್ಷಾತು ಪತಿಯು ವೆಂಕಟರಮಣಗೆ ॥ ೩ ॥ ಶುಕ್ರವಾರದ ಪೂಜೆ ಪುನುಗಾಭಿಷೇಕದಾ । ಸ್ವಾಮಿಪುಷ್ಕರಣಿಲಿ ಸ್ನಾನವನೆ ಮಾಡಿ ॥ ಚಂದದಲಿ ತೀರ್ಥಪ್ರಸಾದ ಕಾಣಿಕೆಯಿತ್ತು । ಸುತ್ತಲು ಗರುಡಕಂಬದ ಜ್ಯೋತಿಯು ॥ ೪ ॥ ಗುತ್ತಿ ಗೊಂದಿಪುರ ಘಟ್ಟಮಾಲಾದೇಶ । ಇಕ್ಕೇರಿ ಶೃಂಗೇರಿ ಉಭಯ ಪುರ ॥ ಒಪ್ಪುವ ಚೋಳಮಂಡಲ ಶ್ರೀಮಂಡಲ । ಉಚ್ಛಾಹ ಬಂದ ಶ್ರೀವೆಂಕಟರಮಣಗೆ ॥ ೫ ॥ ವಿಜಯನಗರ ಪಿಲುಪಕ್ಷಿಯಾನೆಗೊಂದಿ । ಹರಿಹರ ಕೈಲಾದ ಉಮಯಾಪುರ ॥ ಗಜಗ ಲಕ್ಷ್ಮೀಸರ ಹೊಸಭಾನು ಹೊಸಪೇಟೆ । ಉಡುಗರೆ ಬಂದ ವೆಂಕಟರಮಣಗೆ ॥ ೬ ॥ ತೆಲಗ ತಿಗಳ ಮಲೆಯಾಳ ಪಾಂಡವದೇಶ । ಗವುಳ ಗಚ್ಚಾಳ ಕರ್ಣಾಟದೇಶ ॥ ಉಡುಪಿ ಕಲ್ಲೂರು ಕೃಷ್ಣವೇಣಿ ಶ್ರೀರಂಗ । ಮುಡುಪುಗಳು ಬಂದ ವೆಂಕಟರಮಣಗೆ ॥ ೭ ॥ ತೊಟ್ಟಿಚಕ್ರದ ಕಪಿಲತೀರ್ಥ ಸ್ನಾನವು ಮಾಡಿ। ಪಾಪವಿನಾಶನೆಯಲ್ಲಿ ಪಾಪವನೆ ಕಳದು ॥ ಕೋಟಿದೇವಿಗೆ ಕೋಟಿ ಪುಷ್ಪಗಳು ಸಮರ್ಪಿಸಿ । ಸಹಸ್ರ ನೈವೇದ್ಯ ವೆಂಕಟರಮಣಗೆ ॥ ೮ ॥ ಕೊಟ್ಟರೆ ವರಗಳನು ತಪ್ಪಿಲ್ಲವೆನುತಲೆ । ಬೆಟ್ಟದ ಮೇಲೆ ತಾ ನೆಲಸಿಹಗೆ ॥ ಥಟ್ಟನೆ ತಿರುಪತಿ ಮೇಲೆ ನೆಲಸಿದ । ಬೆಟ್ಟದ ಒಡೆಯ ಪುರಂದರವಿಠಲಗೆ ॥ ಜಯಮಂಗಳಂ ॥ ೯ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೪೬. ರಾಗ ಸುರುಟಿ, ಆದಿತಾಳ.

ಮಂಗಳಂ ಜಯ ಮಂಗಳಂ ॥ ಪಲ್ಲ ॥ ಗೋಪಗೋಪಿಸುತಗೆ ಗೋಪಳರಾಯಗೆ । ಗೋವರ್ಧನೋದ್ಧರ ಗೋವಿಂದಗೆ ॥ ಗೋಕುಲದಲಿ ಹುಟ್ಟಿ ಗೋವುಗಳನೆ ಕಾಯಿದ । ಗೋಪಾಲಕೃಷ್ಣನ ಶ್ರೀಪಾದಕ್ಕೆ ॥ ೧ ॥

ಭಕ್ತಜನ ಪಾಲಿಪಗೆ ಭವರೋಗವೈದ್ಯಗೆ । ಅಚ್ಯುತಾನಂತ ಆದಿಪುರುಷಗೆ ॥ ಅಖಿಳಲೋಕೇಶಗೆ ಅಜನ ಪಡದಾತಗೆ । ಕ್ಷೀರಸಾಗರವಾಸಿ ಲಕ್ಷ್ಮೀಶಗೆ ॥ ೨ ॥ ಪನ್ನಂಗಶಯನಗೆ ಪಾವನಚರಿತ್ರಗೆ । ಸನ್ನುತಾನಂತ ಸದ್ಗುಣರಾಶಿಗೆ ॥ ಎನ್ನೊಡೆಯ ಪುರಂದರವಿಠಲರಾಯಗೆ । ತನ್ನ ನಂಬಿದವರ ಸಲಹುವ ದೇವಗೆ ॥ ಮಂಗಳಂ ॥ ೩ ॥ ಶ್ರೀಃ ॥

## ೧೪೭. ರಾಗ ಭೈರವಿ, ಅಟತಾಳ.

ಜಯಮಂಗಳಂ ನಿತ್ಯ ಶುಭಮಂಗಳಂ ॥ ಪಲ್ಲ ॥ ದುರುಳ ತಮ ವೇದವನು ಕದ್ದು ಪಾತಳದಲ್ಲಿ । ಇರಲವನ ಕೊಂದು ವೇದಾವಳಿಗಳ ॥ ಸರಸಿಜೋದ್ಭವಗಿತ್ತು ಸುರಮುನಿಗಳನೆಲ್ಲ । ಹೊರವ ಶ್ರೀಮಚ್ಛಾವತಾರ ಹರಿಗೆ ॥ ೧ ॥ ಸುರರು ದೈತ್ಯರು ಕೂಡಿ ಸಿಂಧುವನು ಮಥಿಸುತಿರೆ । ಗಿರಿ ಮುಣುಗಿ ಪಾತಾಳಕಿಳಿದುಪೋಗೆ ॥ ಭರದಿಂದಲಿ ಬಂದು ಗಿರಿಯ ಬೆನ್ನಲೊತ್ತು । ಸುರರ ರಕ್ಷಿಸಿದ ಶ್ರೀಕೂರ್ಮ ಹರಿಗೆ ॥ ೨ ॥ ಭೂಮಿಯನು ಹಿರಣ್ಯಾಕ್ಷನೆಂಬೊ ದೈತ್ಯನು ಸುತ್ತಿ । ಭೀಮವಿಕ್ರಮನು ಪಾತಾಳಕೊಯ್ಯೆ ॥ ತಾಮರಸಸಂಭವನು ಬಿನ್ನೈಸಲವನ ಕೊಂದು । ಭೂಮಿಯನು ತಂದ ಶ್ರೀವರಹ ಹರಿಗೆ ॥ ೩ ॥ ಪರಮ ಭಾಗವತ ಪ್ರಹಲ್ಲಾದನ ಹಿರಣ್ಯಕನು । ಪರಿಪರಿಯ ಬಾಧೆಯಿಂದಲಿ ಪೀಡಿಸೆ ॥ ಕರುಣಾಳು ಕೋಪದಲಿ ದೈತ್ಯನುದರವ ಬಗದ । ಶರಣರಕ್ಷಕನಾದ ನರಸಿಂಹಗೆ ॥ ೪ ॥ ಬಲಿಚಕ್ರವರ್ತಿ ಭೂಮಿಯ ಧಾರೆಯೆರೆಯಲು । ಇಳೆಯನಳದವನ ಸುತಳಕ್ಕಿಳುಹಿದೆ ॥ ಸಿಲುಕಿ ಭಕುತಿಗೆ ಮೆಚ್ಚಿ ಬಾಗಿಲ ಕಾಯಿದೆ । ಬಲವಂತ ವಾಮನಾವತಾರ ಹರಿಗೆ ॥ ೫ ॥ ಕಾರ್ತವೀರ್ಯಾರ್ಜುನನ ಸಂಹರಿಸಿ ಮುದದಿಂದ । ಕೀರ್ತಿಯನು ಲೋಕದೊಳು ವಿಸ್ತರಿಸಿದೆ ॥ ಪಾರ್ಥಿವಾಂತಕ ಬಾಹುಬಲ ಪರಿಪೂರ್ಣನೆ । ಆರ್ತಬಾಂಧವ ಭಾರ್ಗವರಾಮಗೆ ॥ ೬ ॥ ದಶರಥನ ಮನೆಯಲುದ್ಭವಿಸಿ ರಾವಣಾಸುರನ । ದಶಶಿರವನೀಡ್ಯಾಡಿ ಅವನನುಜಗೆ ॥ ವಸುಧಾಧಿಪತ್ಯವನು ಲಂಕೆಯೊಳಗವಗಿತ್ತು । ಅಸಮವಿಕ್ರಮ ರಾಮಚಂದ್ರ

ಹರಿಗೆ ॥ ೭ ॥ ಯದುಕುಲದಲಿ ಬಂದು ಕೊಂದು ಕಂಸನಸಂದು ಮುದದಿ ಪಾಂಡವರನು ಉದ್ಧರಿಸಿದೆ ॥ ವದಗಿ ಕೌರವಬಲವ ಸಂಹರಿಸಿ ಪದವಿತ್ತು । ಮುದದಿ ಮನ್ನಿಸಿದ ಶ್ರೀಕೃಷ್ಣ ಹರಿಗೆ ॥ ೮ ॥ ತ್ರಿಪುರದಸು ರಾರಿಯರ ಸತಿಯರ ಪತಿವ್ರತವ । ಅಪಹರಿಸಿ ದಿವ್ಯ ಮೋಹರೂಪದಿ ॥ ತ್ರಿಪುರಹರಗಂಬಾಗಿ ಶಿವಗೆ ಕೀರ್ತಿಯನಿತ್ತು । ಅಪರಿಮಿತ ಬುದ್ಧಾವ ತಾರ ಹರಿಗೆ ॥ ೯ ॥ ಕಲಿಯುಗದ ಕಡೆಯಲ್ಲಿ ಖಳನೃಪರನೆಲ್ಲರನು । ತುಳಿಸಿ ಕುದುರೆಯ ಖುರದ ಪುಟಗಳಿಂದ ॥ ಸುಲಭದಿಂ ನಡಸುತ ಕೃತಯುಗದ ಧರ್ಮವನು । ಬಲ್ಲಂಥ ಕಲ್ಕ್ಯಾವತಾರ ಹರಿಗೆ ॥ ೧೦ ॥ ಮಂಗಳ ಪದಂಗಳನು ಭಕುತಿಯಿಂದಲಿ ಮೋಹನತ । ರಂಗನೇರೆಲ್ಲ ರಾಗದಿ ಪಾಡಲು ॥ ಮಂಗಳಾತ್ಮಕ ಸಿರಿಪುರಂದರವಿಠಲಗೆ । ಅಂಗ ನೇರೆಲ್ಲ ಆರತಿಯೆತ್ತಿರೇ ॥ ಜಯಮಂಗಳಂ ॥ ೧೧ ॥ ಶ್ರೀ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

ಪುರಂದರದಾಸರ ಕೀರ್ತನೆಗಳು ಸಂಪೂರ್ಣ.

# ಪುರಂದರದಾಸರ ಉಗಾಭೋಗಗಳು.

### ರಾಗ ಆನಂದಭೈರವಿ, ಅಟತಾಳ.

೧.

ನಿನ್ನ ಧ್ಯಾನವ ಕೊಡೋ । ಎನ್ನ ಧನ್ಯನ ಮಾಡೋ ॥ ಪನ್ನಂಗ ಶಯನ ಶ್ರೀಪುರಂದರವಿಠಲಾ ॥ ಪಲ್ಲ ॥ ಅಂಬುಜನಯನನೆ ಅಂಬುಜ ಜನಕನೆ । ಅಂಬುಜನಾಭ ಶ್ರೀಪುರಂದರವಿಠಲಾ ॥ ೧ ॥ ಪಂಕಜನಯ ನನೆ ಪಂಕಜಜನಕನೆ । ಪಂಕಜನಾಭ ಶ್ರೀಪುರಂದರವಿಠಲಾ ॥ ೨ ॥ ಭಾಗೀರಥೀಪಿತ ಭಾಗವತರ ಪ್ರಿಯ । ಯೋಗಿಗಳರಸ ಶ್ರೀಪುರಂದರ ವಿಠಲಾ ॥ ೩ ॥ ಶ್ರೀ ॥

೨.

ಎಂದಿಗಾದರು ನಿನ್ನ ಪಾದಾರ । ವಿಂದವೆ ಗತಿಯೆಂದು ನಂಬಿ ದೆನೋ ॥ ಬಂಧುಬಳಗವ ಬಿಟ್ಟು ಬಂದೆ ನಿನ್ನ ಮನೆಗಿಂದು । ಮಂದರ ಧರ ಗೋವಿಂದ ಪುರಂದರವಿಠಲನೆ ನೀ ಬಂಧೂ ॥ ೧ ॥ ಅನ್ಯರೊಬ್ಬರ ಕಾಣೆ ಮನ್ನಿಸುವರೆನ್ನ ಆಪನ್ನರಕ್ಷಕನೆ ಪರಿಪಾಲಿಸು । ಇನ್ನು ಪನ್ನಂಗ ಶಯನ ಶ್ರೀಪುರಂದರವಿಠಲನೆ ಬಂಧೋ ॥ ೨ ॥ ಭಾರಿ ಭಾರಿಗೆ ನಿನ್ನ ಚರಣಕ್ಕೆ ಶರಣೆಂದೆ ಭಾರತಿರಮಣನೆ ಬಾರೊ ಮನೆಗಿಂದು । ತಂದೆ ಶ್ರೀಪುರಂದರವಿಠಲರಾಯನೆ ಎಂದೆಂದಿಗು ನೀನೆ ಜಗಕೆ ಬಂಧೂ ॥ ೩ ॥

೩.

ಅಲ್ಲದ ಕರ್ಮವ ಆಚರಿಸಿದವ ಕೆಟ್ಟ । ಎಲ್ಲರೊಳಗೆ ವಿರೋಧಿಸಿ ದವ ಕೆಟ್ಟ । ಬಲ್ಲಿದವರೊಡನೆ ಸೆಣಸಾಡುವವ ಕೆಟ್ಟ । ನಲ್ಲೆಮಾತಿನ ಸತಿಯ ನಂಬಿದವ ಕೆಟ್ಟ । ಫುಲ್ಲನಾಭ ನಮ್ಮ ಪುರಂದರವಿಠಲನ ಮೆಲ್ಲಡಿ ನಂಬದವ ಕೆಟ್ಟರಗೇಡಿ ॥ ಶ್ರೀಃ ॥

೪.

ಹಾಡಿದರೆ ಯೆನ್ನೊಡೆಯನ ಹಾಡುವೆ ಬೇಡಿದರೆನ್ನೊಡೆಯನ ಬೇಡುವೆ । ಒಡೆಯಗೆ ಒಡಲನು ತೋರುತ । ಎನ್ನ । ಬಡತನ ಬಿನ್ನಹ ಮಾಡುವೆ । ಒಡೆಯ ಪುರಂದರವಿಠಲರಾಯನ । ಅಡಿಗಳನು ಸಾರಿ ಬದುಕುವೆ ಸಾರಿ ಬದುಕುವೆ ॥ ಶ್ರೀಃ ॥

೫.

ಗುರಿಯನೆಚ್ಚವನೆ ಬಲ್ಲಾಳು । ಹರಿಯ ಭಜಿಸಲರಿಯದವನ ಪಾಸಾಳು । ಹರಿಯೆಂದು ಓದದೆಲ್ಲವು ಹಾಳು । ಪುರಂದರವಿಠಲ ಪಾರ್ಥನ ಮನೆ ಆಳು ॥ ಶ್ರೀಃ ॥

೬.

ಆಯುಸ್ಸು ಇದ್ದರೆ ಅನ್ನಕ್ಕೆ ಕೊರತಿಲ್ಲ । ಜೀವಕ್ಕೆ ಯೆಂದೆಂದಿಗೆ ತನುಗಳು ಕೊರತಿಲ್ಲ । ಸಾವು ಹುಟ್ಟು ಯೆಂಬೊ ಸಹಜ ಲೋಕ

ವೊಳಗೆ । ಕಾಲಕಾಲದಿ ಹರಿ ಕಲ್ಯಾಣ ಗುಣಗಳ ಕೇಳದವನ ಜನ್ಮ ವ್ಯರ್ಥಾ ಪುರಂದರವಿಠಲ ॥ ಶ್ರೀಃ ॥

೭.

ಉದಯ ಅಸ್ತಮಾನವೆಂಬೊ ಎರಡು ಕೊಳಗವಿಟ್ಟು । ಆಯುಸ್ಸ ಯೆಂಬೊ ರಾಶಿ ಅಳದು ಹೋಗ ಮುನ್ನೆ । ಹರಿಯ ಭಜಿಸಬೇಕು ಮನ ಮುಟ್ಟಿ ಭಜಿಸಿದರೆ । ತನಕಾರ್ಯವು ಘಟ್ಟಿ ॥ ಹಾಂಗಲ್ಲದಿದ್ದರೆ ತಾಪ ತ್ರಯ ಬೆನ್ನಟ್ಟಿ । ವಿಧಿಯೊಳು ಗೈವಾಗ ಹೋಗದಯ್ಯ ಕಟ್ಟಿ । ಪುರಂದರ ವಿಠಲನ ಕರುಣಾದ ದೃಷ್ಟಿ । ಅವನ ಮೇಲಿದ್ದರೆ ಆ ಜಗಜಟ್ಟಿ ॥ ಶ್ರೀಃ ॥

೮.

ಮನಶುದ್ಧಿಯಿಲ್ಲದವಗೆ ಮಂತ್ರದ ಫಲವೇನು । ತನುಶುದ್ಧಿ ಯಿಲ್ಲದವಗೆ ತೀರ್ಥದ ಫಲವೇನು । ಮಿಂದಲ್ಲಿ ಫಲವೇನು ಮಿನು ಮೊಸಳೆಯಂತೆ । ನಿಂದಲ್ಲಿ ಫಲವೇನು ಶ್ರೀಶೈಲದ ಕಾಗೆಯಂತೆ । ಹೊರಗೆ ಮಿಂದು ವಳಗೆ ಮಿಯದವರ ಕಂಡು ಬೆರಗಾಗಿ ನಗುತಿಪ್ಪ ಪುರಂದರಾವಿಠಲಾ ॥ ಶ್ರೀಃ ॥

೯.

ನರವೃಂದ ರೆಂಬೊ ಕಾನನದಲ್ಲಿ ಶ್ರೀಹರಿನಾಮವೆಂಬಂಥಾ ಕಲ್ಪವೃಕ್ಷ ಹುಟ್ಟಿತಯ್ಯಾ । ನೆರಳು ಸೇರಾಲುಂಟು ಫಲವು ಮೆಲ್ಲಾ ಲುಂಟು । ನಾಲಿಗೆಯಲಿ ನಾಮತ್ರಯಂಗಳುಂಟು ॥ ಇದೇ ಮನುಜರ ಮನಸಿನ ಕೊನೆಯ ತಾವು । ಇದು ಬ್ರಹ್ಮಾದಿಗಳ ಸದಮಲ ಪೀಠ । ಇದೆ ದ್ವಾರಕೆ ಇದೆ ಕ್ಷೀರಾಂಬುಧಿ । ಇದೆ ಪುರಂದರವಿಠಲನ ಮಂದಿರಾ ॥

೧೦.

ಅತ್ತೆ ಅತ್ತೆ ಅತ್ತೆಯಂದತ್ತೆ । ಅತ್ತೆ ಸತ್ತರೆ ಸೊಸೆ ಅಳುವಂತೆ ಆಯಿತು । ಅತ್ತೆ । ಅತ್ತೆ ಸತ್ತರೆ ಸೊಸೆಗೆ ಬುದ್ಧಿಯಾಯಿತು ॥ ಅತ್ತೆ ಸತ್ತರೆ ಸೊಸೆಯರಿಗಿದೆ ಗಿಚ್ಚು ಹೋಯಿತೆಂದು । ಅತ್ತೆ । ಪುರಂದರ ವಿಠಲನ್ನ ಪಾದದಲ್ಲಿ ಭಕ್ತಿಯಿಲ್ಲದವರ ಮುಂದೆ ಪಾಡಿ ನಾ ಅತ್ತೆ ॥

## ೧೧.

ಹಾರುವನ್ನ ಹೆಟ್ಟಬೇಕು । ಹಾರುವನ್ನ ಕುಟ್ಟಬೇಕು । ಹಾರುವನ್ನ ಕಂಡರೆ ಚಂಪೆಮ್ಯಾಲೆ ಹೊಡಿಯಬೇಕು । ಹಾರುವಾನು ಪರಧನಾ ಪರಸತಿ ವಶನಾಗಿ । ಊರುವಳಗೆ ಆರುಮಂದಿ ಹಾರುವಾರು । ನೈದಾರಹಾರ ತಂದೆ ಮಾಡು ಎನ್ನ ಪುರಂದರವಿಠಲಾ ॥ ಶ್ರೀಃ ॥

## ೧೨.

ಹಂಗಿಸಿ ಹಂಗಿಸಿ ಯೆನಗೆ ಹರಿನಾಮ ನಿಲಿಸಿದರು । ಭಂಗಿಸಿ ಭಂಗಿಸಿ ಪೈಲರಾಶಿ ಕೆಡಿಸಿದರು । ಕಂಗೊಳಿಸಿ ಕಾಮವೆಂಬೊ ಕ್ರೋಧ ಕೆಡಿಸಿದರು । ಯೆನ್ನ । ನಿಂದಿಸಿದರೆ ಯೆನ್ನ ಬಂಧುಬಳಗ । ಬಾಯಬಡಕರಿಂದ ನಾನು ಬದುಕಿದೆನೋ ಹರಿಯೇ ॥ ಕಾಡಿ ಕಾಡಿ ಕೈವಲ್ಯಪದವಿತ್ತರು । ಕಾಸು ಹುಟ್ಟದಂತೆ ಪ್ರಾಯಶ್ಚಿತ್ತ ಮಾಡಿದರು । ಮಿಾಸಲು ಮಾಡಿಸಿದರು ಹರಿಯ ವಡವೆ ಯೆಂದು । ಲೇಸು ಕೊಡೊ ನಮ್ಮ ಪುರಂದರವಿಠಲನ್ನ । ದಾಸರ ದಾಸನೆಂದೆನಿಸಯ್ಯ ಹರಿಯೇ ॥ ಶ್ರೀಃ ॥

## ೧೩.

ಸಂತತಿ ಆಹೊದು ರಾಮಾಯಣವ ಕೇಳಲು । ಸಕಲ ಪಾಪ ಹರವು ಭಾರತ ಕೇಳಲು । ತಂತುಮಾತ್ರ ವಿಷ್ಣುಪುರಾಣವ ಕೇಳಲು । ತತ್ವವಿವೇಕವು ಬಾಹೋದು । ಅಂತರವರಿತು ಭಾಗವತ ಕೇಳಲು । ಆಹೋದಗ್ರ್ಯನಾ ಭಕ್ತಿ ವೈರಾಗ್ಯವು । ಸತತ ಪುರಂದರವಿಠಲನ ಸಂಕೀರ್ತನೆ ಪಾಡಲು ಸಕಲವು ಬಾಹೊದು । ಸಾಯುಜ್ಯವು ॥ ಶ್ರೀಃ ॥

## ೧೪.

ನಿನ್ನನೆ ಪಾಡುವೆ ನಿನ್ನನೆ ಪೊಗಳುವೆ । ನಿನ್ನನೆ ಜೇಡಿ ಜೇಸರಿಸುವೆ । ನಿನ್ನ ಕಾಲನು ಪಿಡಿವೆ ನಿನ್ನ ಹಾರೈಸುವೆ । ನಿನ್ನ ತೊಂಡರಿಗೆ ಕೈಗೊಡುವೆ ॥ ನಿನ್ಹೊರತು ಸಾಕಬಲ್ಲ ದೇವರಿನ್ನುಂಟೆ । ಘನ್ನ ಪುರಂದರವಿಠಲ ದೇವರದೇವ ॥ ಶ್ರೀಃ ॥

## ೧೫.

ಕೆಟ್ಟೆನೆಂದೆನಲ್ಯಾಕೊ ಕ್ಲೇಶಪಡುವದ್ಯಾಕೊ ಗೇಣು । ಹೊಟ್ಟೆಗಾಗಿ ಪರರ ಕಷ್ಟಬಡಿಸಲ್ಯಾಕೊ। ಹುಟ್ಟಿಸಿದ ದೇವ ಹುಲ್ಲು ಮೇಯಿಸುವನಲ್ಲ । ಬೆಟ್ಟದ ಮೇಲಿದ್ದರೇನು ವನದೊಳಿದ್ದರೇನು । ಸೃಷ್ಟಿಮಾಡಿದ ದೇವ ಸ್ಥಿತಿಮಾಡಲರಿಯನೆ । ಘಟ್ಯಾಗಿ ಸಲಹುವ ಪುರಂದರವಿಠಲಾ ॥

## ೧೬.

ತಪ್ಪುರಾಶಿಗಳ ಒಪ್ಪಿ ಕಾಯೊ ಕೃಪಾಳು। ಮುಪ್ಪುರವನಳಿದಂಥ ಮುನೀಂದ್ರ ಮಧ್ಯ । ಅಪ್ರಮೇಯನೆ ನಿನ್ನ ಅದ್ಭುತ ಮಹಿಮೆಗಳ। ಅಪ್ಪುನಿಧಿಯಲ್ಲಿ ಪುಟ್ಟಿದವಳ ನೀಯಾಳು । ಕಪ್ಪು ಮೇಘ ಕಾಂತಿಯೊಪ್ಪುವ ತಿಮ್ಮಪ್ಪ । ಅಪ್ರಾಕೃತರೂಪ ಪುರಂದರವಿಠಲಾ ॥ ಶ್ರೀಃ ॥

## ೧೭.

ದಾಸನಾಗುವದಕ್ಕೆ ಯೇಸುಜನ್ಮದ ಸುಕೃತ । ಭಾಸುರ ರವಿಕೋಟಿ ಶ್ರೀಶ ಸುಗುಣವಂತ ॥ ನಾಶರಹಿತ ನಿನ್ನ ದಾಸರ ದಾಸ್ಯ । ಲೇಸಾಗಿ ಕೊಡು ಕಂಡ್ಯ ಪುರಂದರವಿಠಲಾ ॥ ಶ್ರೀಃ ॥

## ೧೮.

ದಾಸನಾದವಗೆ ವೈಕುಂಠದಲ್ಲಿ ವಾಸ । ದಾಸನಾಗದವನೆಲ್ಲಿಪೋದರೆ ಭಾಗ ॥ ದಾಸನೆಂದೆನಿಸಿದ ಭಾರತಿಯ ಗಂಡ ಸತ್ಯಲೋಕವನಾಳ್ವ ಶೌಂಡ। ದಾಸರ ಹೃದಯದಿ ಮಿನುಗುವ ಶ್ರೀಶ ವಾಸವಾದಿವಂದ್ಯ ದ್ವಿ। ಸಾಸಿರಾಂಬಕ ಶರಣ್ಯ ದಾಸರಿಗೊಲಿವ ಪುರಂದರವಿಠಲ ॥ ಶ್ರೀಃ ॥

## ೧೯.

ಜಗವ ಸುತ್ತಿಹುದೆಲ್ಲ ನಿನ್ನ ಮಾಯವಯ್ಯ । ನಿನ್ನ ಸುತ್ತಿಹುದೆಲ್ಲ ಯೆನ್ನ ಮಾನವಯ್ಯ ॥ ಜಗಕೆ ಬಲ್ಲಿದ ನೀನು। ನಿನಗೆ ಬಲ್ಲಿದ ನಾನು। ಮೂರುಜಗವು ನಿನ್ನೊಳಗೆ। ನೀನು ಯೆನ್ನೊಳಗೆ। ಕರಿಯು ಕನ್ನಡಿಯಲ್ಲಿ ಅಡಗಿಪ್ಪ ತೆರದಂತೆ। ಯೆನ್ನೊಳು ಅಡಗಿದಿಯೊ ಪುರಂದರವಿಠಲಾ ॥

## ೨೦.

ತುಳಸಿಯಿರಲು ತುರಚಿಯನು ತರುವಿರೋ । ಗಂಗೆಯಿರಲು ತೋಡಿದ ಕೂಪದಿ ಪಾನವ ಮಾಡಿದೆ । ರಾಜಹಂಸವಿರಲು ಕೋಯೆಂದು ಕೂಗುವ ಕೋಳಿಗೆ ಹಾಲೆರದೆ। ಬಾವನವಿರಲು ಬೇಲಿನ ನೆಳಲೊಳೊರಗಿದೆ। ತಾಯಿ ಮಾರಿ ತೊತ್ತ ತರುವ ಮಾನವನಂತೆ ಪುರಂದರವಿಠಲ ನೀನಿರಲನ್ಯತ್ರ ದೈವಂಗಳ ಯೆಣಿಸಿದೇ ॥ ಶ್ರೀಃ ॥

## ೨೧.

ಬೆಲ್ಲದ ಕಟ್ಟೆಯ ಕಟ್ಟಿ ಬೇವಿನ ಬೀಜವ ಬಿತ್ತಿ । ಜೇನು ಮಳೆಗರದರೆ ವಿಷ ಹೋಗುವದೇನಯ್ಯಾ । ಯೇನು ನೋಡಿದರೇನು ಯೇನು ಕೇಳಿದರೇನು । ಮನದೊಳಗಿನ ತಾಮಸ ಮಾಣದನ್ನಕ । ಕೊಳಲಧ್ವನಿಗೆ ಸರ್ಪ ತಲೆತೂಗುವಂದದಿ । ಇದಕೇನು ಮದ್ದು ಶ್ರೀಪುರಂದರ ವಿಠಲಾ ॥ ಶ್ರೀಃ ॥

## ೨೨.

ಸೂಸಲಾಸೆಗೆ ಪೋಗಿ ಬಡಿಗಲ್ಲಿನೊಳು ಸಿಕ್ಕಿದ । ಮೂಷಕನ ತೆರನಾದೆನೊ ಎಲೊ ದೇವ । ಹೇಸಿಕೆ ವಿಷಯಂಗಳಿಗೆ ಯೆರಗುತಿದೆ ಯೆನ್ನ ಮನ । ಘಾಸಿಯಾದೆನೊ ಹೃಷೀಕೇಶ ನೀ ಸಲಹಯ್ಯ । ವಾಸವಾರ್ಚಿತ ಗುರು ಪುರಂದರವಿಠಲ ನಿನ್ನ । ದಾಸರ ಸಂಗದೊಳು ಇರಿಸೆನ್ನ ಅನವರತ ಕ್ಲೇಶ ಕಳೆಯಯ್ಯಾ ॥ ಶ್ರೀಃ ॥

## ೨೩.

ಹರಿಗುರುಗಳಿಗೆರಗದೆ ಹರಿಭಕ್ತಿ ಯೆರಗದೆ । ಕೆರವ ತಿಂಬೊ ನಾಯಿಗೆ ತುಪ್ಪವಾಗ ಸೊಗಸುವದೆ । ಹರಿನಾಮಕ್ಕೆ ಹರಿದಾಸರು ಕರಗುವರಲ್ಲದೆ । ನರಕಭಾಜನಿಗು ಪಾಮರರು ಕರಗುವರೇ । ಚಂದ್ರ ಕಿರಣಕೆ ಚಂದ್ರಕಾಂತಿ ವಸರುವುದಲ್ಲದೆ । ಗೋರಿಕಲ್ಲು ವಸರುವುದೆ ಸಿರಿಪುರಂದರವಿಠಲಾ ॥ ಶ್ರೀಃ ॥

೨೪.

ಚೋರಗೆ ಚಂದ್ರೋದಯ ಸೊಗಸುವದೆ। ಜಾರಗೆ ಸೂರ್ಯೋದಯ ಸೊಗಸುವದೆ। ಶ್ರೀರಮಣನ ಕಥೆಯು ಕಳ್ಳಗೆ ಮೆಚ್ಚುವುದೆ। ನಾರಿಗೆ ನಯನವಿಲ್ಲದ ಚೆಲುವಿಕೆಯು। ಹರಿಸ್ಮರಣವಿಲ್ಲದ ಹಾಡಿಕೆಯು। ಆರಣ್ಯರೋದನ ಪುರಂದರವಿಠಲಾ॥ ಶ್ರೀಃ॥

೨೫.

ಪ್ರಸನ್ನರಕ್ಷಕ ನೀನು ಪಾಲಿಸೋ ನಿನ್ನವನು ನಾನು। ಉಪಸಾಧನವರಿಯೆನೊ ಒಮ್ಮೆ ನಿನ್ನ ನೆನೆವನು। ಅಪರಾಧಿಗಾದಡೇನು ಅಭಯಪ್ರದನು ನೀನು। ವಿಪರೀತ ಮಾಡದೆನ್ನನು ಪುರಂದರವಿಠಲ ನಂಬಿದೆನೋ॥ ಶ್ರೀಃ॥

೨೬.

ಎನ್ನ ಕಡೆಹಾಯಿಸುವುದು ನಿನ್ನ ನೆನೆಯುತ್ತಲಿಹುದು ಯೆನ್ನಯ ವ್ಯಾಪಾರಾ। ಯೆನ್ನ ಸತಿಸುತರಿಗೆ ನೀನೇ ಗತಿ। ನಿನ್ನನೊಪ್ಪಿಸುವುದು ಯೆನ್ನ ನೀತಿ। ಯೆನ್ನ ಪಡಿಯಕ್ಕಿ ಸಲಹುವದು ನಿನ್ನ ಧರ್ಮ॥ ನಿನ್ನ ಅಡಿಗೆರಗುವುದು ಯೆನ್ನ ಕರ್ಮ। ಯೆನ್ನ ತಪ್ಪುಗಳನೆಣಿಸುವುದು ನಿನ್ನದಲ್ಲ। ನಿನ್ನ ಮರೆದು ಬದುಕುವುದು ಯೆನ್ನದಲ್ಲ। ನೀನಲ್ಲದೆ ಇನ್ಯಾರಿಗೆ ಮೊರೆಯಿಡುವೆ ಪುರಂದರವಿಠಲಾ॥ ಶ್ರೀಃ॥

೨೭.

ಮುಗುಳುನಗೆ ಕಲ್ಲು ಮೇಲಿದ್ದರೇನು। ಜಗದೊಳಗೆ ವಾರಿಧಿ ಮೇರೆ ತಪ್ಪಿದರೇನು। ಕಡೆಗೆ ಹಾಕುವರ್ಯಾರಯ್ಯ। ಬಿಡಿಸೊ ಬಿಡಿಸೊ ನಿನ್ನ ಚರಣಕಮಲವನ್ನು। ಯೆನ್ನೊಡೆಯ ಪುರಂದರವಿಠಲರೇಯಾ॥

೨೮.

ಮರವಿದ್ದರೇನಯ್ಯ ನೆರಳಿಲ್ಲದನಕ। ನೆರಳಿದ್ದರೇನಯ್ಯ ನೀರಿಲ್ಲದನಕ। ನೀರಿದ್ದು ಫಲವೇನು ಒರತಿಲ್ಲದನಕ॥ ಧನವಿದ್ದು ಫಲವೇನು ಕೊಡುವ ಮನವಿಲ್ಲದನಕಾ। ಮನವಿದ್ದರೆ ಫಲವೇನು ಜ್ಞಾನವಿಲ್ಲ

ದನಕಾ । ದೇವ ಪುರಂದರವಿಠಲರಾಯನ । ಊಳಿಗ ಮಾಡದವನ ಬಾಳುವೆ ಯಾತಕೇ ॥ ಶ್ರೀಃ ॥

೨೯.

ಹಗಲು ನಿನ್ನ ನೆನೆಯಲಿಲ್ಲ ಹಸಿವೆ ತೃಷೆಯಿಂದ । ಇರುಳು ನಿನ್ನ ನೆನೆಯಲಿಲ್ಲ ನಿದ್ರೆಭರದಿಂದ । ಈ ಯೆರಡರ ಬಾಧೆಗೆ ನಾ ಒಳಗಾದೆನೊ । ಸಲಹೊ ಪುರಂದರವಿಠಲಾ ಪುರಂದರವಿಠಲ ॥ ಶ್ರೀಃ ॥

೩೦.

ಪರಮಾನಂದವು ಹರಿಗೆ ಪರಮಾನಂದವು ಸಿರಿಗೆ । ಪರಮಾನಂದವು ನಮ್ಮ ಪುರಂದರವಿಠಲರಾಯಗೇ ॥ ಶ್ರೀಃ ॥

೩೧.

ಸಿರಿವಿರಿಂಚಾದಿಗಳು ಅರಿಯದಂತ ಮಹಿಮೆ । ಯೆಣಿಸಿ ಪಾಡುವುದಕ್ಕೆ ಅರುಹಯಾರ್ಾರೋ ॥ ಅರವಿಂದದಳನಯನ ಶರಣೆಂದವರ ಕಾಯ್ವ । ಕರುಣಸಾಗರ ನಮ್ಮ ಪುರಂದರವಿಠಲಾ ॥ ಶ್ರೀಃ ॥

೩೨.

ದೇವ ದೇವರ ದೇವ । ಜಗತ್ರಯಂಗಳ ಕಾವ । ಭಾವಜಪಿತ ನಮ್ಮ । ಪುರಂದರವಿಠಲಾ ॥ ಶ್ರೀಃ ॥

೩೩.

ಎರಗಿ ಭಜಿಷೆನೊ ನಿನ್ನ । ಚರಣ ಸನ್ನಿಧಿಗೆ । ಕರುಣದಿಂದಲಿ ನಿನ್ನ । ಸ್ಮರಣೆಯನು ಯೆನಗಿತ್ತು । ಮರಿಯದೆ ಸಲಹೊ ಶ್ರೀ । ಪುರಂದರವಿಠಲಾ ॥ ಶ್ರೀಃ ॥

೩೪.

ಅಣುರೇಣು ತೃಣದಲ್ಲಿ । ಪರಿಪೂರ್ಣನಾಗಿರುವ । ಗುಣವಂತನೆ ನಿನ್ನ । ಮಹಿಮೆ ಗಣನೆಮಾಡುವರಾರು । ಎಣಿಸಿ ನೋಡುವಳಿನ್ನು ॥ ಪಣಾಕ್ಷಿ ಸಿರಿದೇವಿ । ಜ್ಞಾನ ಸುಗುಣತತ್ವ । ವೇಣುಗೋಪಾಲ ಹರೆ । ಕಾಣಿಸೊ ನಿನ್ನ ಮಹಿಮೆ । ಪುರಂದರವಿಠಲಾ ॥ ಶ್ರೀಃ ॥

೩೫.

ಅರ್ಭಕನ ತೊದಲುನುಡಿ ಅವರೆ ತಾಯಿ ತಂದೆ । ಉಬ್ಬಿ ಕೇಳು ವರ್ಯಾರೊ ಉರಗೇಂದ್ರಶಯನ । ಕಬ್ಬು ನಾನಾಡಿದರು ತಾಳಿ ರಕ್ಷಿಸು ಯೆನ್ನ । ಕಬ್ಬುಬಿಲ್ಲನ ಪಿತ ಪುರಂದರವಿಠಲಾ ॥ ಶ್ರೀಃ ॥

೩೬.

ತಿಂಬರೆ ಅನ್ನ ಹುಟ್ಟಲಿಬ್ಯಾಡ । ಅನ್ನ ಹುಟ್ಟಿದರೆ ಬಟ್ಟೆ ದೊರಕಲಿಬ್ಯಾಡ । ಬಟ್ಟೆ ದೊರಕಿದರೆ ಇಂಪು ತೋರಲಿಬ್ಯಾಡ । ಇಂಪು ನಿನ್ನ ಪಾದಾರವಿಂದದಲಿ ಸಂತೋಷ ತೋರಿಸಯ್ಯ । ಇಂದಿರಾರಾಧ್ಯ ಶ್ರೀ ಪುರಂದರವಿಠಲಾ ॥ ಶ್ರೀಃ ॥

೩೭.

ಹೀನಮಾನವ ಯೋನಿಯಲಿ ಜನಿಸಿದೆನೊ ನಾನು । ಏನಾದರೇನು ದೀನದಯಾಸಾಗರನೆ । ಆಗೋನಿ ಯೆನ್ನ ದೇಹ ಅನ್ನವಂತೆ ಮಾಡೊ । ನ್ಯಾಸವನು ಬೋಧಿಸಿ ಸಾನುರಾಗದಿ ಕಾಯೊ । ವೇಣುಧರ ವೇದಾಂತವೇದ್ಯ ನರಹರಿಯೇ । ಕಾನನದೊಳು ಕಣ್ಣ ಕಾಣದವ ಬಿದ್ದಂತೆ ನಾ ಬಿದ್ದೆ । ನೀ ಕಾಯೊ ಪುರಂದರವಿಠಲಾ ॥ ಶ್ರೀಃ ॥

೩೮.

ಹರಿ ನಿಮ್ಮ ಸ್ಮರಣೆಯ ಸ್ಮರಿಸಲು । ದುರಿತ ಪೀಡಿಪುದುಂಟೆ । ಅರಿತು ಭಜಿಪರಿಗೆಲ್ಲ ಕೈವಲ್ಯ ಜೋಕೆ । ಕರುಣವರಿತು ತನ್ನ ಮಗನ ಕೂಗಿದವಗೆ । ಮರಣಕಾಲದಿ ವದಗಿದಿ ಶ್ರೀಪುರಂದರವಿಠಲಾ ॥ ಶ್ರೀಃ ॥

೩೯.

ಅಣುವಿಗೆ ಅಣುವಾಗಿ ಘನಕೆ ಘನವಾಗಿ । ಗುಣತ್ರಯ ತತ್ವಕ್ಕೆ ಮೀರಿದ ಧೊರೆಯಾಗಿ । ತೃಣ ಮೊದಲಾಗಿ ಮೇರು ಪರಿಯಂತ ಇರುವವ ನೀನಾಗಿ । ಗುಣನಿಧಿ ಪುರಂದರವಿಠಲ ನಿನ್ನ ಮಹಿಮೆ । ಎಣಿಕೆ ಮಾಡುವರ್ಯಾರೊ ಯೆನ್ನಪ್ಪನೇ ॥ ಶ್ರೀಃ ॥

೪೦.

ನಿನ್ನ ನಾಮಭಂಡಾರ ಕದ್ದ ಕಳ್ಳನು ನಾನು । ನಿನ್ನ ಭಕುತಿ ಯೆಂಬ ಸಂಕೋಲೆಯನಿಕ್ಕಿ । ನಿನ್ನ ದಾಸರ ಕೈಯಲ್ಲಿ ಒಪ್ಪಿಸಿಕೊಟ್ಟು । ನಿನ್ನ ಮುದ್ರಿಕೆಯಿಂದ ಕಾಸಿ ಬಡಿಸು ದೇವಾ । ನಿನ್ನ ವೈಕುಂಠದುರ್ಗದೊಳ । ಗೆನ್ನ ಸೆರೆಯನಿಟ್ಟು ಸಲಹೊ ಶ್ರೀಪುರಂದರವಿಠಲಾ ॥ ಶ್ರೀಃ ॥

೪೧.

ಬಡವರೊಳಗೆ ಯೆನ್ನಿಂದ್ಯಾರು ಬಡವರಿಲ್ಲ । ಕೊಡುವರೊಳಗೆ ನಿನ್ನಿಂದ್ಯಾರು ಕೊಡುವರಿಲ್ಲ । ದೃಢಭಕ್ತಿ ನಿನ್ನಲ್ಲಿ ಯೆನಗೆ ಕಲ್ಪಿಸಿ । ಬಿಡದೆ ಸಲಹೊ ಶ್ರೀಪುರಂದರವಿಠಲಾ ॥ ಶ್ರೀಃ ॥

೪೨.

ಹಗಲು ನಾಲ್ಕು ಝಾವ ಹಸಿವೆಯು ಕಳೆದೆನೋ । ಇರುಳು ನಾಲ್ಕು ಝಾವ ವಿಷಯಕ್ಕೆ ಕೂಡಿದೆನೊ । ವ್ಯರ್ಥವಾಯಿತಲ್ಲ ಈ ಸಂಸಾರ ಸುಖವೆಲ್ಲ । ಕೇಳಯ್ಯ ತಂದೆ ಶ್ರೀಪುರಂದರವಿಠಲಾ ॥ ಶ್ರೀಃ ॥

೪೩.

ಇಕ್ಕೋ ನಮ್ಮ ಸ್ವಾಮಿ । ಸರ್ವರಂತರ್ಯಾಮಿ । ಪ್ರಕಟ ಸಹಸ್ರನಾಮಿ । ಭಕ್ತಜನಪ್ರೇಮಿ । ವಳನೋಡಿ ನಮ್ಮ । ಹೊಳೆವ ಪರಬ್ರಹ್ಮ । ನರಿಯಬೇಕು ಮರ್ಮ । ವಸ್ತುವಿನ ನೋಡಿ । ಸಮಸ್ತಮನ ಮಾಡಿ । ಅಸ್ತವಸ್ತು ಬೇಡಿ । ಸಮಸ್ತ ನಿಜಗೂಡಿ । ಮಾಡು ಗುರುಧ್ಯಾನ । ಮುಟ್ಟು ಪುರಂದರವಿಠಲನ ಚರಣವಾ ॥ ಶ್ರೀಃ ॥

೪೪.

ಊರಿಗಂಜೆ ಸಿರಿಗಂಜೆ ಶರೀರದ ಭಯಕಂಜೆ । ಪರಧನ ಪರಸತಿ ಯರಡಕ್ಕಂಜುವೆನಯ್ಯ । ಹಿಂದೆ ಮಾಡಿದ ರಾವಣನೇನಾಗಿ ಪೋದನು । ಮುಂದೆನ್ನ ಸಲಹಯ್ಯ ಪುರಂದರವಿಠಲಾ ॥ ಶ್ರೀಃ ॥

೪೫.

ಹೊಲೆಯು ಬಂದಾನೆಂದು ಒಳಗೆ ದೇವರ ಮಾಡಿ । ಘಣ ಘಣ ಘಂಟೆ ಬಾರಿಸುತ । ತನುವಿನ ಕೋಪ ಹೊಲೆಯಲ್ಲವೇನಯ್ಯ । ಮನಸಿನ ವಂಚನೆ ಹೊಲೆಯಲ್ಲವೇನಯ್ಯ । ಇಂಥಾ ಹೊರಗಿದ್ದ ಹೊಲೆಯನ್ನು ಒಳಗೆ ತುಂಬಿಟ್ಟುಕೊಂಡು । ಇದಕ್ಕೇನು ಮದ್ದು ಶ್ರೀಪುರಂದರ ವಿಠಲಾ ॥ ಶ್ರೀಃ ॥

೪೬.

ಆನೆಯನು ಕಾಯಿದಾಗ ಜ್ಞಾನವಿದ್ದದ್ದೇನು । ನಾನು ಒದರಲು ಈಗ ಕೇಳದಿದ್ದದ್ದೇನು । ದಾನವಾಂತಕ ದೀನರಕ್ಷಕನೆಂಬೊ ಮಾನವು ಳಿಸಿಕೊಳ್ಳೊ । ಶ್ರೀಪುರಂದರವಿಠಲಾ ॥ ಶ್ರೀಃ ॥

೪೭.

ಸಕಲ ಶ್ರುತಿಪುರಾಣಗಳೆಲ್ಲ ದಾವನ ಮಹಿಮೆ । ಸುಖಪೂರ್ಣ ಸುರವರಾರ್ಚಿತ ಪಾದ । ಶಕಟಮರ್ದನ ಶಾರದೇಂದುವಕ್ತ್ರ । ರುಚಿಕರ ವರಕಲ್ಯಾಣರಂಗ । ರುಕ್ಮಿಣಿರಮಣ ಪರಿಪೂರ್ಣ ನಮ್ಮ ಪುರಂದರ ವಿಠಲಾ ॥ ಶ್ರೀಃ ॥

೪೮.

ಕಾವ ದೈವವು ನೀನೆ ಕೈಮುಗಿವೆನು ನಾನು । ಕೈವಲ್ಯಫಲದಾತ ಕೇಶವನೆ ರಘುನಾಥ । ಯಾವ ದೈವಕ್ಕಿನ್ನು ಈ ವೈಭವಗಳ ಕಾಣೆ । ರಾವಣಾಂತಕ ಶ್ರೀಪುರಂದರವಿಠಲಾ ॥ ಶ್ರೀಃ ॥

೪೯.

ಸನಕಾದಿಗಳ ಹಂಸದಂತೆ ಕಮಲದಲಿ ನಲಿವ ಮೂರುತಿಯನು । ಮನುಜೋತ್ತಮರೆಂಬ ಮನ ಅಂಬರದೊಳು । ಕಾಲಮಿಂಚಿನಂತೆ ಥಳಥಳಿಸುವ ಗುರುಪುರಂದರವಿಠಲಾ ॥ ಶ್ರೀಃ ॥

೫೦.

ಸಿರಿ ಚತುರ್ಮುಖ ಸುರರು । ಮನು ಮುನಿಗಳು । ಮನುಜೋತ್ತಮರು । ತಾರತಮ್ಯಯುಕ್ತರು । ಪುರಂದರವಿಠಲನ ಸದಾ ಶರಣರು ॥

### ೫೧.

ನಿತ್ಯ ಪತಿಭಾವ ಶ್ರೀಲಕುಮಿದೇವಿಗಯ್ಯ । ನಿತ್ಯ ಪುತ್ರಭಾವ ಬೊಮ್ಮ ಪ್ರಾಣರಿಗೆ । ನಿತ್ಯ ಪೌತ್ರಭಾವ ಗರುಡ ಶೇಷ ರುದ್ರರಿಗೆ । ನಿತ್ಯ ಭೃತ್ಯಭಾವ ಇಂದ್ರ ಕಾಮ ಆತ್ಮಜೀವರಿಗೆ । ಇಂತೆಂದ ಪುರಂದರ ವಿಠಲಾ ॥ ಶ್ರೀಃ ॥

### ೫೨.

ಸತ್ಯಜನಾಭನೆ । ಸತ್ಯಮಹಿಮನೆ । ಸತ್ಯಕಾಮನೆ । ಸತ್ಯಪೂರ್ಣನೆ । ಸತ್ಯಭೂಷಣ । ನಿತ್ಯ ಪುರಂದರವಿಠಲರೇಯಾ ॥ ಶ್ರೀಃ ॥

### ೫೩.

ಮನೋವಚನಗಳಲ್ಲಿ । ಕಾಯ ಕರ್ಮಗಳಲ್ಲಿ । ನೀನೇ ನೀನೇ ನೀನೇ ಪುರಂದರವಿಠಲಾ ॥ ಶ್ರೀಃ ॥

### ೫೪.

ಆದಿಸೃಷ್ಟಿಯಿಲಾರು ಮೊದಲೆ ಉದಿಸಿದರೇನು । ಅವರವರೆ ಅಧಿಕರಧಿಕರಯ್ಯ । ಕಾಲಾಜಯಾದಿಗಳು ಮೊದಲೆ ಉದಿಸಿದರೇನು । ಅವರವರೆ ಅಧಿಕರಧಿಕರಯ್ಯ । ಅವರಂತರಂತರ ಅವರ ನೋಡಯ್ಯ । ಅವರವರೆ ಅಧಿಕರಧಿಕರಯ್ಯ । ಪುರಂದರವಿಠಲನ ಸಂತತಿ ನೋಡಯ್ಯ । ಅವರವರೆ ಅಧಿಕರಧಿಕರಯ್ಯ ॥ ಶ್ರೀಃ ॥

### ೫೫.

ಹರಿ ಸರ್ವೋತ್ತಮನೆಂಬೊ ಹಿರಿಪುತ್ರನಿರಲಾಗಿ ಈ ನರಪುತ್ರರಿಂದ ಆಹೋದೇನಯ್ಯಾ । ಪದ್ಮನಾಭನೆಂಬೊ ದೊಡ್ಡಪುತ್ರನಿರಲಾಗಿ ಈ ದಡ್ಡಪುತ್ರನಿಂದಲಿ ಆಗೋ ಗತಿಯೇನಯ್ಯಾ । ಶ್ರೀಕೇಶವನೆಂಬೊ ಜ್ಯೇಷ್ಠಪುತ್ರನಿರಲಾಗಿ ಈ ನಷ್ಟಪುತ್ರರಿಂದಲಾಗೋ ಗತಿಯೇನಯ್ಯಾ । ಪುರಂದರವಿಠಲನೆಂಬೊ ಪುಣ್ಯಪುತ್ರನಿರಲಾಗಿ ಈ ಅನ್ಯಪುತ್ರರಿಂದಲಿ ಆಗೋ ಗತಿಯೇನಯ್ಯಾ ॥ ಶ್ರೀಃ ॥

೫೬.

ಕಾಳೀಯನಂತೆ ಕಟ್ಟಿ ಬಿಗಿಯಬೇಕು। ಬಲಿಯಂತೆ ನಿನ್ನ ಬಾಗಿಲ ಕಾಯಿಸಲಿಬೇಕು । ಕುಬ್ಜೆಯಂತೆ ನಿನ್ನ ರಟ್ಟೆಬುತ್ತು ಮಾಡಿ ಮುಂಜೆರಾಗ ಪಿಡಿದು ಗುಂಜೆ ಹಾಕಿಸಬೇಕು । ಪುರಂದರವಿಠಲ ನಿನ್ನ ಅಟಿ ಮುಟ್ಟಿ ಹಾಕೆಂದರೆ। ಪುಟ್ಟಿದು ರವಿ ತಿರಿತಿಂಬಂತೆ ಮಾಡುವೆ ॥

೫೭.

ಪಾಂಡುತನಯನಂತೆ ಕರದು ನಿನ್ನ ಅಟ್ಟುವಮಾಣಿಗೆ ಮಣೆಯ ಹಾಕಿಕ್ಕಬೇಕು । ಅರ್ಜುನನಂತೆ ನಿನ್ನ ಬಂಡಿಯ ಬೋವನ ಮಾಡಿ ಕುದುರೆ ಲಗಾಮು ಹಿಡಿಸಲಿಬೇಕು । ಆಹಾ ಅನುದಿನ ಅರ್ಚಿಸಿ ಪೂಜಿಸಿ ಮೋಸಹೋದೆ ಸ್ವಾಮಿ ಪುರಂದರವಿಠಲಾ ॥ ಶ್ರೀ ॥

೫೮.

ಬಲಿಯಂತೆ ಮುಕುಟವ ಕದ್ದುಕೊಂಡೋಡಬೇಕು । ವಾಲಿಯಂತೆ ನಿನ್ನ ಮೂದಲಿಸಲಿಬೇಕು । ಸುಗ್ರೀವನಂತೆ ನಿನ್ನ ಲೆಕ್ಕಿಸದಿರಬೇಕು । ಪುರಂದರವಿಠಲ ನಿನ್ನ ನಂಬಿರಬೇಕು ॥ ಶ್ರೀ ॥

೫೯.

ಜಗದಂತರ್ಯಾಮಿ ನೀನು ನಿನ್ನ ಬಿಟ್ಟು ಬಯಲೆಂದು ಬಗೆವನೆ ಬ್ರಹ್ಮಹತ್ಯಗಾರ । ಅಗಣಿತಗುಣ ನೀನು ನಿನ್ನ ಗುಣಗಳೆಂತೆಂದು ಬಗೆವನೆ ಜಗದೊಳಗೆ ಸ್ವರ್ಣಸ್ತೇಯಿ । ನೀ ಸೇವ್ಯ ಜಗದೊಡೆಯ ನೀನಿರಲು ಅನ್ಯದೇವರೊಡೆಯನೆಂದು ಬಗೆವನೆ ಜಗದೊಳಗೆ ಮದ್ಯಪಾನಿ । ಜಗದ ತಂದೆ ನೀನು ನಿನ್ನ ದಾಸನೆನ್ನದೆ ನೀನು ತಾನೆಂದು ಬಗೆವನ ಜಗದೊಳಗೆ ಗುರುತಲ್ಪಗಾ । ಇವರ ಸಂಸರ್ಗಿ ತತ್ಸಂಯೋಗಿಗಳು ಇವರು ಪಂಚಮಹಾಪಾತಕಿಗಳು । ಇದರ ಕಾರಣದಿಂದ ನೀ ನಿತ್ಯ ನೀ ಸತ್ಯ ನೀ ಸೇವ್ಯ । ಅಗಣಿತಗುಣಗಣನಿಲಯ ನೀನೆ ತಂದೆ ಜಗದಂತರ್ಯಾಮಿ ನೀನು । ನಿನ್ನ ದಾಸರ ಸಂಗ ಸಕಲ ಸುಖಸಂಪದವು । ನಂಬಿದೆನೊ ಸಲಹೋ ಪುರಂದರವಿಠಲರೇಯ ಅಯ್ಯಯ್ಯ ಅಯ್ಯಾ ॥

೬೦.

ತಂದೆ ನಾ ತಂದೆ ನೀ ತಂದೆ ನಾ ಬಂದೆ । ಕಾಮದಲಿ ತಂದೆ ನೀ ಕ್ರೋಧದಲಿ ತಂದೆ । ತಾಮಸ ಕಡುಯೋನಿಯಲ್ಲಿ ನೀ ತಂದೆ ನಾ ಬಂದೆ ॥ ಒಂದಲ್ಲ ಯೆರಡಲ್ಲ ಮೂರಲ್ಲ ನಾಲ್ಕಲ್ಲ । ಯೆಂಭತ್ತುನಾಲಕು ಲಕ್ಷ ಯೋನಿಯಲ್ಲಿ ನೀ ತಂದೆ ನಾ ಬಂದೆ ॥ ಹಿಂದಿನ ಜನ್ಮ ಹ್ಯಾಗಾದರಾಗಲಿ ಮುಂದೆನ್ನ ಸಲಹೊ ಪುರಂದರವಿಠಲಾ ॥ ಶ್ರೀಃ ॥

೬೧.

ಆವಿನ ಕೊಂಬಿನ ತುದಿಯಲ್ಲಿ ಸಾಸಿವೆ ನಿಂತಿಪ್ಪ ಕಾಲವೆ ನಿನ್ನ ನೆನೆದವ ಜೀವನ್ಮುಕ್ತನಲ್ಲವೆ । ಸರ್ವಕಾಲದಲಿ ಒರಳುತ್ತ ನರಳುತ್ತ ಹರಿಹರಿ ಯೆಂದವ ಜೀವನ್ಮುಕ್ತ ಯೆಂಬದಕ್ಕೆ ಯೇನು ಆಶ್ಚರ್ಯವಯ್ಯ ಪುರಂದರವಿಠಲ ॥ ಶ್ರೀಃ ॥

೬೨.

ಹರಿ ನೀ ಒಲಿವಂತೆ ಮಾಡು । ಒಲಿದರೆ ತಿರಿದಂತೆ ಮಾಡು । ತಿರಿದರೆ ದಾರು ನೀಡದಂತೆ ಮಾಡು । ದಾರು ನೀಡಿದರೆ ಹೊಟ್ಟೆ ತುಂಬವಂತೆ ಮಾಡು । ಪೊಟ್ಟೆ ತುಂಬಿದರೆ ಬಟ್ಟೆ ದೊರೆಯದಂತೆ ಮಾಡು । ಬಟ್ಟೆ ದೊರೆತರೆ ಇಂಬು ದೊರೆಯದಂತೆ ಮಾಡು । ಇಂಬು ದೊರೆಯದಿದ್ದರೆ ರಂಗ ನಿನ್ನ ಪಾದಾರವಿಂದದಲ್ಲಿ । ಇಂಬಿಟ್ಟು ಸಲಹೊ ಪುರಂದರವಿಠಲಾ ॥ ಶ್ರೀಃ ॥

೬೩.

ಮಾತಾಪಿತರು ನಿನಗಂದೆ ಮಾರಿದರೆನ್ನ । ನಾಥನೆ ನೀ ಯೆನ್ನ ಸಲಹದಿದ್ದರೆ ದೇವ । ಯಾತಕೆ ಭಕ್ತವತ್ಸಲನೆನಿಸಿಕೊಂಡೆ । ನಾ ತಡೆಯನೊ ನಿನ್ನ ಬಿರುದಿಗಂಜುವನಲ್ಲ । ಸಾತ್ವಿಕ ದೈವವೆ ಸಲಹೊ ಎನ್ನ ಪ್ರಖ್ಯಾತಪುರುಷ ಶ್ರೀಪುರಂದರವಿಠಲಾ ॥ ಶ್ರೀಃ ॥

೬೪.

ಕೋಳಿಗೆ ಯಾತಕ್ಕೆ ಹೊನ್ನುಪಂಜರವು । ಬೋಳಿಗೆ ಯಾತಕ್ಕೆ ಜಾಜಿ ಮಲ್ಲಿಗೆ ದಂಡೆ ॥ ಆಳಿಲ್ಲದವನಿಗೆ ಅರಸುತನವ್ಯಾತಕೆ । ಮಾಳಿಗೆ

ಮನೆಯು ಬಡವಗಿನ್ಯಾತಕೆ ॥ ನಿನ್ನ ಊಳಿಗಮಾಡದವನ ಬಾಳು ಇನ್ಯಾತಕೆ । ಕೇಳಯ್ಯ ದೇವ ಪುರಂದರವಿಠಲಾ ॥ ಶ್ರೀಃ ॥

೬೫.

ಬಲಿಯ ಮನೆಗೆ ವಾಮನ ಬಂದಂತೆ । ಭಗೀರಥಗೆ ಶ್ರೀಗಂಗೆ ಬಂದಂತೆ । ಮುಚುಕುಂದಗೆ ಶ್ರೀಮುಕುಂದ ಬಂದಂತೆ । ಗೋಪಿಯರಿಗೆ ಗೋವಿಂದ ಬಂದಂತೆ । ವಿದುರನ ಮನೆಗೆ ಶ್ರೀಕೃಷ್ಣ ಬಂದಂತೆ । ವಿಭೀಷಣನ ಮನೆಗೆ ಶ್ರೀರಾಮ ಬಂದಂತೆ । ನಿನ್ನ ನಾಮವು ಯೆನ್ನ ನಾಲಿಗೆಲಿ ಬಿಂದು । ನಾಥನ್ನ ನಿಂದಂತೆ ಶ್ರೀಪುರಂದರವಿಠಲಾ ॥

೬೬.

ಮರ್ಕಟನ ಕೈಸೂಲು ಗುಕ್ಕರಿಯ ತೆರನಂತೆ । ಸಿಕ್ಕಿಕೊಂಡು ಕಾಮ ಕ್ರೋಧಾದಿಗಳಿನ್ನ । ಹಿಕ್ಕಿ ಹೀರುತಲಿದೆ ಯಾಕೆ ನೋಡುತಲಿದ್ಯೋ । ಅಕ್ಕಟಕ್ಕಟ ನಿನ್ನ ದಾಸನಲ್ಲವೆ ನಾನು । ಸಿಕ್ಕುಬಿಡಿಸಿ ನಿನ್ನ ಭಕುತಿಯ ತೋರಿಸೊ । ಪಕ್ಕದೊಳಗಿಟ್ಟು ಸಲಹೊ ಪುರಂದರವಿಠಲಾ ॥

೬೭.

ಅಣುವಾಗಬಲ್ಲ ಮಹತ್ತಾಗಬಲ್ಲ । ಅಣು ಮಹತ್ತೆರಡೊಂದಾಗಬಲ್ಲ ॥ ರೂಪನಾಗಬಲ್ಲ ಅರೂಪನಾಗಬಲ್ಲ । ರೂಪ ಅರೂಪ ಯೆರಡೊಂದಾಗಬಲ್ಲ ॥ ಸುಗುಣನಾಗಬಲ್ಲ ನಿರ್ಗುಣನಾಗಬಲ್ಲ । ಸುಗುಣ ನಿರ್ಗುಣ ಯೆರಡೊಂದಾಗಬಲ್ಲ ॥ ವ್ಯಕ್ತನಾಗಬಲ್ಲ ಅವ್ಯಕ್ತನಾಗಬಲ್ಲ । ವ್ಯಕ್ತ ಅವ್ಯಕ್ತ ಯೆರಡೊಂದಾಗಬಲ್ಲ ॥ ಘಟಿತಾಘಟಿತಾಚಿಂತ್ಯಾದುಭುತ । ಸ್ವಗತ ಸ್ವರೂಪ ನಮ್ಮ ಪುರಂದರವಿಠಲಾ ॥ ಶ್ರೀಃ ॥

೬೮.

ಕಣ್ಣಲಿ ಕೇಳುವ ಕಾಂಬುದನರಿವ । ಆಘ್ರಾಣಿಸುವ ಆಸ್ವಾದಿಸುವ ರಸನದಿ ಕೇಳುವ । ಕರ್ಮಲೋಪಕ ಲೋಕವಿಲಕ್ಷಣ ಪುರಂದರವಿಠಲಾ ॥ ಶ್ರೀಃ ॥

೧೯.

ಆಪಾವ ಯುಗದಲಿ ವಿಷ್ಣು ವ್ಯಾಪಕನಾಗಿ । ವಿಷ್ಣು ಇದ್ದಲ್ಲಿ ವಿಷ್ಣು ಲೋಕಕಾಗಿಪ್ಪದಾಗಿ । ಸಾಲೋಕ್ಯ ಸಾರೂಪ್ಯ ಸಾಮಿಪ್ಯ ಸಾಯುಜ್ಯ । ಸಾದೃಶ್ಯಂಗಳು ಪಂಚವಿಧ ಮುಕುತಿದಾಯಕ । ಭರಿತ ನಮ್ಮ ಪುರಂದರವಿಠಲಾ ॥ ಶ್ರೀ ॥

೨೦.

ಶ್ರೀಪತಿಯ ಕಟಾಕ್ಷವೀಕ್ಷಣ ತಪ್ಪುವಾಗ । ಅನೇಕ ಬಂಧುಗಳು ಲಕ್ಷ ವೈದ್ಯರುಗಳು । ಇರಲಾಗಿ ಕಣ್ಣ ಕಣ್ಣ ಬಿಡುವರು । ತಾಪಸಿಯಾರಣ್ಯದೊಳಗೆ ಒಬ್ಬ ಒಂಟಿಯಾಗಿರಲು । ಅಂಜಬ್ಯಾಡೆಂದು ನಮ್ಮ ಕಂಜನಾಭನೆ ಬಂಧು । ಆಪತ್ತುಗಳ ಪರಿಹರಿಸುವ ನಮ್ಮ ಪುರಂದರ ವಿಠಲಾ ॥ ಶ್ರೀ ॥

೨೧.

ಲೇಸು ದಾಸರಿಗೆ ಸಿರಿ ಭಾಗವತರಿಗೆ । ದಾರಿದ್ರ್ಯ ದ್ರೋಹಿಗಳಿಗೆ ಕೀರ್ತಿ ಕಿಂಕರರಿಗೆ । ಅಪಕೀರ್ತಿ ಕ್ರೂರರಿಗೆ ಜಯ ದೇವರಿಗೆ । ಅಪಜಯ ಮಂಕುಗಳಿಗೆ ನಷ್ಟ ಕಪಟರಿಗೆ । ಲಾಭ ಮಹಾತ್ಮರಿಗೆ ಪುರಂದರ ವಿಠಲನ ಆಳುಗಳಿಗೆ ಮುಕ್ತಿ । ದೈತ್ಯರಿಗೆ ಅಂಧಂತಮಸ್ಸು ಸಂದೇಹ ವಿಲ್ಲಾ ॥ ಶ್ರೀ ॥

೨೨.

ಅಣಕದಿಂದಾಗಲಿ ಡಂಭಕದಿಂದಾಗಲಿ । ಇದ್ದಾಡಾಗಾಗಲಿ ಬಿದ್ದಾಡಾಗಾಗಲಿ । ತಾಗಿದಾಡಾಗಲಿ ತಾಕಿಲ್ಲಾದಾಡಾಗಲಿ । ಮರದು ಮತ್ತೊಮ್ಮೆಯಾಗಲಿ ಹರಿ ಹರಿ ಅಂದವನಿಗೆ । ನರಕದ ಭಯವ್ಯಾಕೆ ಯಮಪಟ್ಟಣ ಕಟ್ಟಿದರೇನು । ಯಮಪಟ್ಟಣ ಬಟ್ಟಬಯಲಾದರೇನು । ಹರಿದಾಸರಿಗೆ ಪುರಂದರವಿಠಲಾ ॥ ಶ್ರೀ ॥

೨೩.

ಧ್ವಜ ವಜ್ರಾಂಕುಶ ರೇಖಾಂಕಿತವಾದ ಹರಿಪಾದಾಂಬುಜ ಸೇವಿಪ ಭಾಗವತರ ಭಾಗ್ಯವ ನೋಡೋ । ತ್ರಿಜಗವಂದ್ಯನ ಪಾಡು ಭಕ್ತಿ

ಮಸು ಬೇಡು । ಕುಜನರ ಮಾತುಗಳ ಸುಡು ಮರ್ಜನರ ಸಂಗವ ಬಿಡು । ಗಜೇಂದ್ರನ ಕಾಯಿದ ಶ್ರೀಕೃಷ್ಣನ ಸ್ಮರಣೆಮಾಡು । ಪುರಂದರ ವಿಠಲನ ಬಿಡದೆ ಕೊಂಡಾಡು ॥ ಶ್ರೀಃ ॥

೭೪.

ಸಾಗರಗಡೆಯು ಮಾಡಿ ಧರೆಯು ಕೂರಿಗೆ ಮಾಡಿ । ಹರ ಬ್ರಹ್ಮ ರೆಂಬೊ ಯೆರಡೆತ್ತು ಹೂಡಿ । ನರರೆಂಬೊ ಬೀಜವ ಬಿತ್ತಿ ಧರೆಯೊಳಗೆ ಇಂದ್ರ ಬೆಳಸುವಾತಾ ಚಂದ್ರ ಕಳೆ ಕೀಳಿಸುವಾತಾ । ಯಮರಾಯ ನಯ್ಯ ಬಿತ್ತಿದ ಬೆಳಸೆಲ್ಲ ಯೆತ್ತಿಕೊಂಡು ಹೋದಾಗ । ಮುಃಖಬಡಬ್ಯಾ ಡೆಂದನು ಪುರಂದರವಿಠಲಾ ॥ ಶ್ರೀಃ ॥

೭೫.

ಬೇಡುವ ಕಷ್ಟಕಿಂತ ಸಾವದೆ ವರಲೇಸು । ಬೇಡುವರಿಗೆ ಮೊಬ್ಬಿ ಉಳಿಯೊದುಂಟೇನೊ ದೇವ । ಧೊರೆಯುಂಟೆ ಗೂಡುಕಿರಿದು ಮಾಡಿ । ಬಲಿಯ ದಾನವ ಬೇಡಿ ನಾಡು ಅರಿಯಲು । ಸ್ಥೂಲ ಸೂಕ್ಷ್ಮ ನಿನ್ನದೆ । ಬೇಡುವ ಕಷ್ಟವನು ನೀನೆ ಬಲ್ಲೆಯೋ । ಸ್ವಾಮಿ ಯೆನ್ನ ಬೇಡದಂತೆ ಮಾಡಯ್ಯ ಪುರಂದರವಿಠಲಾ ॥ ಶ್ರೀಃ ॥

೭೬.

ಆ ಹರಿಸಿರಿಚರಣವಿರಲು ಮಿಕ್ಕ । ಭೂರಿ ದೈವಗಳ್ಯಾಕೆ ಭಜಿಸುವಿ ಮರುಳೆ । ನೀರಡಿಸಿ ಜಾಹ್ನವಿ ತೀರದಲ್ಲಿದ್ದು । ಭಾವಿನೀರು ಕುಡಿವ ಮಾನವರುಂಟೆ । ಕಾರುಣ್ಯ ವೈಕುಂಠ ವಿಠಲರೇಯ । ತಿರುವೆಂಗಳಪ್ಪ ಸಿರಿಪುರಂದರವಿಠಲಾ ॥ ಶ್ರೀಃ ॥

೭೭.

ಯಾರು ಮುನಿದು ನಮಗೇನು ಮಾಡುವರಯ್ಯ । ಯಾರು ಒಲಿದು ನಮಗೇನು ಕೊಡುವರಯ್ಯ । ಕೊಡಬ್ಯಾಡ ನಮ್ಮ ಕುನ್ನಿಗೆ ಕಾಸನು । ಈಯಲುಬ್ಯಾಡ ನಮ್ಮ ಶುನಕಗೆ ತಳಗಿಯ । ಆನೆಮ್ಯಾಲೆ ಪೋಪಗೆ ಶ್ವಾನ ಮುಟ್ಟಬಲ್ಲುದೆ । ನಮಗೆ ಶ್ರೀಪುರಂದರವಿಠಲಾನೆ ಸಾಕು ॥ ಶ್ರೀಃ ॥

೭೮.

ಸಂತತ ಹನ್ನೆರಡು ಕೋಟಿ ಸುವರ್ಣಪುಷ್ಪ ಸಮರ್ಪಿಸಲು। ಅಂತ್ಯ ಫಲದಿ ಕೋಟಿ ಕೋಟಿ ಅಗಣಿತ ಫಲವು। ಅರ್ಧ ತುಳಸಿದಳದ ತಂತು ಮಾತ್ರ ಭಕ್ತಿಯಿಂದ ಸಮರ್ಪಿಸಲು। ಶ್ರೀಹೇಮಗರ್ಭ ಪುರಂದರ ವಿಠಲ ವೈಕುಂಠ ಪದವಿಯನೀವನೋ॥ ಶ್ರೀ॥

೭೯.

ಜೀವಜೀವಕೆ ಭೇದ। ಜಡಜಡಕೆ ಭೇದ। ಜೀವಜಡ ಪರಮಾತ್ಮನಿಗೆ ಭೇದ। ಜೀವಾಜೀವ ಮುಕ್ತಾಮುಕ್ತರ ಭೇದ। ಸಂಸಾರದೊಳು ಭೇದ। ಮುಕ್ತರೊಡೆಯ ಹರಿ ಭಕ್ತರಾಧೀನ। ಜಗತ್ಕರ್ತನೀ ಸಲಹಯ್ಯ ಪುರಂದರವಿಠಲಾ॥ ಶ್ರೀ॥

೮೦.

ಇದರಿಂಬಿಟ್ಟೆನಿಲ್ಲೆಂಬ ಮಹಾವ್ಯಾಧಿ ಬರಲಿ। ಮತ್ತಿದರಿಂಬಿಟ್ಟೆನಿಲ್ಲೆಂಬ ಮಹಾ ಭೀತಿ ಬರಲಿ। ಮತ್ತಿದರಿಂಬಿಟ್ಟೆನಿಲ್ಲೆಂಬ ಮಹಾ ಬಾಧೆ ಬರಲಿ। ಮತ್ತಿದರಿಂಬಿಟ್ಟೆನಿಲ್ಲೆಂಬ ಮಹಾ ಆಪತ್ತು ಬರಲಿ। ಮತ್ತಿದರಿಂಬಿಟ್ಟೆನಿಲ್ಲೆಂಬ ಅದಕೊಂದಿದಕೊಂದ್ಯೋಚಿಸಬ್ಯಾಡಿ ಕಾಣಿರೋ। ಮತ್ತದಕೊಂದಿದಕೊಂದ್ಯೋಚಿಸಬ್ಯಾಡಿ ಕಾಣಿರೋ। ಪುರಂದರವಿಠಲ ತನ್ನ ನಂಬಿದವರ ಹಿಂಧಾಕಿಕೊಂಬ ಕಾಣಿರೋ॥ ಶ್ರೀ॥

೮೧.

ಹಶಿವಾಯಿತೇಳಿ ದೇವರ ತೊಳೆಯೆಂಬರು। ಹಸನಾಗಿ ಮನದಲ್ಲಿ ಮುಟ್ಟಿ ಪೂಜೆಯ ಮಾಡರು। ಹಾಸಿ ಹಾವಿನ ಬುಟ್ಟಿಯಂತೆ ಮುಚ್ಚಿಟ್ಟುಕೊಂಡು। ವಸುಧೆಯೊಳಗೆ ಉರಗಗಾರನಾಟ ಮಾಡುವರಯ್ಯಾ। ಪರಧನ ಪರಸತಿ ಪರದ್ರವ್ಯಕ್ಕೆರಗೋರು। ತ್ವರೆಗಳಾಗಿದ್ದರೆ ದುರಿತ ಪೋಗುವದೆ। ಸರುವವೆಲ್ಲವ ತೊರೆದು ಹರಿಯ ಧ್ಯಾನವ ಮಾಡಿ। ವರವ ಕೊಡುವ ನಮ್ಮ ಪುರಂದರವಿಠಲ॥ ಶ್ರೀ॥

## ೮೨.

ಬಡಗಿನ ನಾಡಲ್ಲಿ ಒಂದು ವಿಪರೀತ ಹುಟ್ಟಿತು । ಮುಂದೆ ಮುದ್ದ ಮಾಡಿದ ಕಣಕದ ರೊಟ್ಟಿ । ಅದಕೆ ಸಾಧನ ತೋವೆ ಕಟಿಕೆಟ್ಟಿ । ಅದರ ಮೇಲಹೆ ತಾ ಪುಣ್ಯವು ಪುಟ್ಟಿ । ಪುರಂದರವಿಠಲನ ಪ್ರಸಾದ ಘಟ್ಟಿ । ಯಾವಾಗ ದೊರಕಿದಾವಾಗ ಜಗಜಟ್ಟಿ ॥ ಶ್ರೀಃ ॥

## ೮೩.

ಅಪಾಯ ಕೋಟಿ ಕೋಟಿಗಳಿ ಉಪಾಯವೊಂದೆ ಹರಿ ಭಕ್ತರ ತೋರಿಕೊಟ್ಟು । ಉಪಾಯವೊಂದೆ ಪುರಂದರವಿಠಲನೆಂದು ಜೋಪಿಟ್ಟು ಕರೆವ ಉಪಾಯ ವೊಂದೇ ॥ ಶ್ರೀಃ ॥

## ೮೪.

ಏಳುತ್ತ ಗೋವಿಂದಗೆ ಕೈಯ್ಯ ಮುಗಿವೆ । ಕಣ್ಣಲಿ ತೆಗೆದು ನೋಡುವೆ ಶ್ರೀಹರಿಯ । ನಾಲಿಗೆ ತೆಗೆದು ನಾರಾಯಣ ನರಹರಿ ಸೋಳಸಾಸಿರ ಗೋಪಿಯರರಸ । ಯೆನ್ನಾಳುವ ದೊರೆಯೆ ಪುರಂದರವಿಠಲಾ ॥

## ೮೫.

ಶ್ರೀರಾಮ ಎಂದರೆ ಭಾಗ್ಯಕ್ಕೆ ಕಾರಣ । ಶ್ರೀಕೃಷ್ಣ ಎಂದರೆ ದುರಿತ ನಿವಾರಣ । ಯೆಚ್ಚತಿರು ಯೆಲೆ ಮನ ಮನವೆ ಯೆಚ್ಚತ್ತಿರೆಲೆ ಮನವೆ । ಯಾಕೆ ಬೈಲನು ನೆನೆವೆ ಅಚ್ಯುತಾನಂತ ಗೋವಿಂದನೆಂಬ ನಾಮದಲಿ ಯೆಚ್ಚತಿರೆಲೆ ಮನವೆ । ಯಾಕೆ ಬಯಲ ನೆನೆವೆ ಅಚ್ಯುತನೆ ಆದಿಕೇಶವನೆ ಅನಾಥಬಂಧೋ ಸಲಹೆಂದು । ಅಚ್ಯುತನ ಪಾದವೆ ನಂಬು ಗತಿಯೆಂದು ಯೆಚ್ಚತಿರೆಲೆ ಮನವೆ । ಅನಂತಾನಂತ ದೇವರ ದೇವ ರಂಗೇಶ । ಅನಂತನೆಂದರೆ ಬಲುಭಯವಿನಾಶ ಅನಂತನೆಂದರೆ ತಡೆವ ಯಮಪಾಶ ಯೆಚ್ಚತಿರಲೆ ಮನವೆ । ಗೋವಿಂದನೆಂದರೆ ಸಕಲ ತೀರ್ಥಸ್ನಾನ ಗೋವಿಂದನೆಂದರೆ ಸಕಲ ಮೂರ್ತಿಧ್ಯಾನ । ಗೋವಿಂದನೆಂದರೆ ಪುರಂದರವಿಠಲ ಕೊಡುವ ಸಕಲ ಸುಜ್ಞಾನಾ ॥ ಶ್ರೀಃ ॥

೮೬.

ತಾಯಿ ಗೋಪಿಯಂತೆ ನಿನ್ನ ಒರಳನೆಳಿಸಲಿಲ್ಲ । ವಾಲಿಯಂತೆ ನಿನ್ನ ವಾದಿಸುತಿರಲಿಲ್ಲ । ಭೃಗುಮುನಿಯಂತೆ ನಿನ್ನ ಯೆದೆಯ ತುಳಿಯ ಲಿಲ್ಲ । ಭೀಷ್ಮನಂತೆ ನಿನ್ನ ಹಣೆ ವಡಿಯಲಿಲ್ಲ । ಕೊಂಕಣಿಗರ ಯೆನ್ನೆಗೆ ಕೊಡತಿಯೆ ಮಸ್ತೆಂದು । ಅವರಿವರೆ ಮುದ್ದು ಪುರಂದರವಿಠಲಾ ॥

೮೭.

ಪ್ರಾತಃಕಾಲದ ನಿದ್ರೆ ಪರಿಹರಿಸಿ ಹರಿಯ ಸ್ಮರಿಸಿ । ನಾಥ ಗೋ ವಿಂದಗೆ ಪ್ರದಕ್ಷಿಣೆ । ಪ್ರೀತಿಯೊಳತಿಥಿಪೂಜೆ ಪುರಾಣ ಶಾಸ್ತ್ರವ ಕೇಳಿ । ನಾಥ ಶ್ರೀಪುರಂದರವಿಠಲಗೆ ನಮೋ ಯೆನ್ನು ॥ ಶ್ರೀ ॥

೮೮.

ಹರೇ ಗೋವಿಂದ ಯೆಂದೇಳು । ಹತ್ತಾವತಾರವ ಪೇಳು । ಮೂಡಲ ನಡೆ ಗೋವಿಗೆ ತುಳಸಿಗೆರಗು । ಒಂದು ನೈಋತಿಯಲ್ಲಿ ತೃಣ ಬಿಟ್ಟು ಶೌಚಮಾಡು । ಗುರುಪರಂಪರಾಯೆಲ್ಲವಂದು ಪುರಂದರವಿಠಲ ಯೆನ್ನು ॥ ಶ್ರೀ ॥

೮೯.

ನುಡಿವೆ ಲಿಂಗಶೌಚಕೊಮ್ಮೆ ಗುದಕ್ಕೆ ಮೂರು ನೆಲ್ಲಿಕಾಯಷ್ಟು ಮಣ್ಣು । ಸಲಿಸಿ ನೀರೊಳು ತೊಳೆದು ಬಲಗೈಗೆ ಅಯಿದು ಮಣ್ಣು ॥ ಎಡಕೈಗೆ ಯೇಳು ಮಣ್ಣು ಜೋಡುಪಾದಕ್ಕೆ ಅಯಿದ್ಮೆದು ಮಣ್ಣು । ಅಯಿದು ಕಡೆಯೊಳಿಟ್ಟು ಪುರಂದರವಿಠಲ ಯೆನ್ನು ॥ ಶ್ರೀ ॥

೯೦.

ಹಲವು ಕರ್ಮಗಳಿಗೆ ಹವಣೆ ಯೆರಡಾಚಮನೆ । ಮಲ ಮೂತ್ರ ವಿಸರ್ಜನೆಯಲಿ ಮಾಡು ಮೂರಾಚಮನೆ ॥ ನಲಿದುಂಡ ಮೇಲೆ ಮತ್ತೆ ಮಾಡು ನಾಲ್ಕಾಚಮನೆ । ಲಲನೆರ ಸಂಗಕ್ಕೆ ಮಾಡು ಅಯಿದಾಚ ಮನೆ । ಯೆಂದ ಲಕ್ಷ್ಮೀಪತಿ ಪುರಂದರವಿಠಲೇಶ್ವರಾ ॥ ಶ್ರೀ ॥

೯೧.

ಆಕಳ ಕಿವಿಗೆಣೆ ಅಂಗಯ್ಯ ಹಳ್ಳ ಇರಬೇಕು । ಉದ್ದು ಮುಣು ಗುವಂತೆ ಇರಬೇಕು ನೀರು । ಸಾಕಾಗದೆ ಹೆಚ್ಚು ಕಡಿಮೆ ಸಾಕೆಂದು ಕುಡಿವರೆ ಅದನು । ಸಾಕಾರ ಪುರಂದರವಿಠಲ ಮದ್ಯಸವು ಮಾಡುವಾ ॥

೯೨.

ಹತ್ತೈದು ಘಳಿಗೆ ಮೇಲ್ ಮತ್ತೈದು ಬರಲಿದ್ದು । ಚಿತ್ತಜನಯ್ಯ ನನ್ನು ಚಿತ್ತದಿ ಧ್ಯಾನಿಸೀ । ಅತ್ತ ಉದಯಕ್ಕೆ ಘಳಿಗೆ ಯೆರಡಿರುವಲ್ಲಿ । ನಿತ್ಯ ಸ್ನಾನ ಮಾಡ್ಯಾದಿತ್ಯಗರ್ಘ್ಯವನಿತ್ತು । ಉತ್ತಮ ಜನರು ಪೊತ್ತಿಪ್ಪ ಪಾಪಗಳನೆಲ್ಲ । ಪುತ್ತರಿಸುವೆನೆಂದಾ ಪುರಂದರವಿಠಲಾ ॥ ತ್ರೀಃ ॥

೯೩.

ರಮೆಯ ರಮಣಾ ತಾನು ಬೊಮ್ಮಾದಿಗಳನೆಲ್ಲ । ಸುಮನಸ ರೊಳು ಸೂರ್ಯಗರ್ಘ್ಯವನಿತ್ತು । ನಿಮ್ಮ ಪಾಪಗಳನೆಲ್ಲ ಚಿಮ್ಮಿ ಕಳಿಯಿ ರೆಂದು । ಬೊಮ್ಮಮೂರುತಿ ತಾ ಘಮ್ಮನೆ ಪೇಳಿರೆ । ನಿಮ್ಮ ಜ್ಞಾನದಿ ಸಿಲುಕಿ ಸುಮ್ಮನೆ ಕೆಡದಿರಿ । ನಿಮ್ಮ ಶಿಕ್ಷಿಪನು ಪುರಂದರವಿಠಲಾ ॥

೯೪.

ನಕ್ಷತ್ರ ಸೂಸಿ ಕಂಡ ನರಗೆ ವುತ್ತುಮ ಸಂಧ್ಯಾ । ನಕ್ಷತ್ರ ವೊಂದೆ ರಡು ಕಂಡ ನರಗೆ ಮಧ್ಯಮ ಸಂಧ್ಯಾ । ನಕ್ಷತ್ರ ದೂರ ಕಾಣದ ನರಗೆ ಅಧಮ ಸಂಧ್ಯಾ । ನಕ್ಷತ್ರ ಬಿಟ್ಟರೆ ನಾರಾಯಣ ಪುರಂದರವಿಠಲ ಬಿಡುವಾ ॥ ತ್ರೀಃ ॥

೯೫.

ಕೂಪದಲ್ಯಾದರು ಕೊಳದಿ ಮುಣುಗಿದಲ್ಯಾದರು । ವಾಪಿಯ ಲ್ಯಾದರು ಅಶುಚಿಯಲ್ಯಾದರು । ಪತ್ನಿ ನೆರದಾದರು ಗೋಪಿಚಂದನದ ಸಂಪರ್ಕವಿದ್ದರೆ । ಮುಖ್ಯವಿದು ಕಾಲ ಸಂಧ್ಯಾವೆಂದು । ಲಕ್ಷ್ಮೀಪತಿ ಪುರಂದರವಿಠಲ ಪೇಳ್ದ ॥ ತ್ರೀಃ ।

೯೬.

ಒಂದೇ ಒಂದು ಬೆರಳು ಜಪ । ಒಂದೇ ಅಯಿದು ಗೆರೆಯ ಜಪ । ಒಂದೇ ಹತ್ತು ಪುತ್ರ ಜೀವಿಮಣಿಯ ಜಪ । ಒಂದೇ ನೂರು ಶಂಖದ ಮಣಿಯ ಜಪ । ಒಂದೇ ಸಾವಿರ ಹವಳದ ಜಪ । ಒಂದೇ ಹತ್ತು ಸಾವಿರ ಮುತ್ತಿನ ಮಣಿಯ ಜಪ । ಒಂದೇ ಲಕ್ಷ ಸುವರ್ಣಮಣಿಯ ಜಪ । ಒಂದೇ ಕೋಟಿ ದರ್ಭೆ ಬೆಟ್ಟಿನ ಜಪ । ಒಂದೇ ಅನಂತ ಶ್ರೀ ತುಳಸಿಮಣಿಯ ಜಪವೆಂದು ಪುರಂದರವಿಠಲ ಪೇಳ್ವ ॥ ಶ್ರೀಃ ॥

೯೭.

ಮನ ಚಂಚಲದಿ ತಪವ ಮಾಡಲು ಅಶಕ್ಯವು । ಘನ ಅಜ್ಞಾನದಿ ಕೆಲವು ಕರ್ಮವು ಹತ್ತವು ॥ ಧನವು ಶುದ್ಧಿಯಿಲ್ಲದ ದಾನವು ವೃಥಾ ಸುವು । ಇನಿತದರಿಂದ ಪುರಂದರವಿಠಲ । ಈ ಯುಗದಲ್ಲಿ ಸ್ಮರಣೆ ಲೇಸೆಂದಾ ॥ ಶ್ರೀಃ ॥

೯೮.

ಗುರುಕರುಣ ಹೊಂದುವದು ಪರಮ ದುರ್ಲಭವಯ್ಯ । ಪರಿ ಪರಿ ವ್ರತಗಳ ಚರಿಸಲು ಫಲವೇನು । ಶರೀರಾದಿ ಪುತ್ರ ಮಿತ್ರ ಕಳತ್ರ ಬಾಂಧವರು । ಇರಿಸೋರೆ ಸದ್ಗತಿಗೆ ಸಾಧನದಿ । ನಿರುತವು ಗುರುಪಾದ ನಿಜವಾಗಿ ಮನದಲ್ಲ್ಯರಿತು ಭಜಿಸಲು । ಅಖಿಳ ಸಂಪದವಕ್ಕು ಪುರಂದರ ವಿಠಲ ॥ ಶ್ರೀಃ ॥

೯೯.

ಹೃದಯದ ಮಲವನ್ನು ತೊಳೆಯಲರಿಯದೆ ತಾವು । ಉದಯ ವೊಳೆದ್ದು ಮಿಂದು ಗದಗದಗುಟ್ಟುವಂತೆ ಅದರಿಂದಲೇನು ಫಲ । ಅದ ಕಿಂತ ಉದಯಾಸ್ತಮನದೊಳಗಿಪ್ಪಾ । ಮುದಿ ಕಷ್ಟೆ ಮಾಡಿದ ತಪ್ಪೇ ನಯ್ಯ ಅದರಿಂದೇನು ಫಲ । ಪುರಂದರವಿಠಲನ ನಾಮವ ನೆನೆಯದೆ ದಿನಕ್ಕೆ ನೂರುಭಾರಿ ಮುಳುಗಿದರೇನಯ್ಯ ॥ ಶ್ರೀಃ ॥

## ೧೦೦.

ದರಿದ್ರರೆನ್ನಬಹುದೆ ಹರಿದಾಸರ । ಶಿರಿವಂತರೆನಬಹುದೆ ಹರಿ ದ್ರೋಹಿಗಳ । ಹರಿದಾಸರ ಮೇಲಿದ್ದ ಕರುಣವು ಶಿರಿದೇವಿ ಮೇಲಿಲ್ಲವೊ । ಪುರಂದರವಿಠಲನ ಆಳುಗಳಿಗೆ ಯೆಲ್ಲಿಹುದೈ ಮಾನಾಭಿಮಾನ ಜಗದಿ ॥

## ೧೦೧.

ಎಲ್ಲಾ ಒಂದೆ ಯೆಂಬುವರಾ ಎರಡು ದಾಡಿ ಶೀಳೆ । ಹಲ್ಲುದುರ ಕುಟ್ಟಲುಬೇಕು ಹರಿಭಕ್ತರಾದವರು । ಸಲ್ಲದು ಸಲ್ಲದು ಈ ಮಾತು ಸಂಶಯಬೇಡಿರೋ । ಕಲ್ಲುನಾರಿಯ ಮಾಡಿದ ಶ್ರೀಪುರಂದರವಿಠಲಾ ॥

## ೧೦೨.

ಜನಕನನೊಲ್ಲೆನವ್ವಾ । ತುಲಕಿ ಆಡುವನಾ । ಷಣ್ಮುಖನನೊಲ್ಲೆ ನವ್ವಾ । ಬಹುಬಾಯಿಯುವನಾ । ಇಂದ್ರನೊಲ್ಲೆನವ್ವಾ । ಮೈಯೆಲ್ಲಾ ಕಣ್ಣನವ್ವಾ । ಚಂದ್ರನೊಲ್ಲೆನವ್ವಾ । ಕಳೆಗುಂದುವನಾ । ರವಿಯನೊಲ್ಲೆ ನವ್ವಾ । ಉರಿದು ಮೂಡುವನಾ । ಹರನನೊಲ್ಲೆನವ್ವಾ । ಮರುಳುಗೊಂ ಬುವನಾ । ಚನ್ನರಾಯ ಚಲುವ ಜಗಕೆಲ್ಲ ಒಡೆಯನ ಕರದು । ತಾನೆ ಎನಗೆ । ಪುರಂದರವಿಠಲಾ ॥ ಶ್ರೀ ॥

## ೧೦೩.

ಎರಡು ಘಳಿಗೆ ಬೆಳಗು ಇರಲು ಗೃಹಸ್ಥಗೆ ಸ್ನಾನ । ಕರವ ಮುಗಿದು ಮಾಡೊ ಸಂಕಲ್ಪ ವೇದ। ಪರಮಪುಣ್ಯಾತ್ರ ಬ್ರಾಹ್ಮಣಧರ್ಮ ನೆಂದು ಪುರಂದರವಿಠಲ ಮೆಚ್ಚಿ ಪಾಲಿಸುವಾ ॥ ಮಲಮೂತ್ರ ಮಾಡು ವಾಗ ಕರದಲ್ಲಿ ಜಲವಿರೆ । ಮಲಕೆ ಸಮಾನ ಅಂದು ಶುದ್ಧವಲ್ಲ । ವಿಲ ಸಿತ ಕರ್ಮವಾಚರಿಸಿ ಹರಿಯ ನೆನೆಯಲು । ಒಲಿವ ಪುರಂದರವಿಠಲ ನಿತ್ಯಾ ॥ ಶ್ರೀ ॥

## ೧೦೪.

ಹಲ್ಲು ಬೆಳಗುವಲ್ಲಿ ಬಿಂಬ । ಪ್ಲಕ್ಷಪತ್ರೆ ನೆಲ್ಲು ನಿಲ್ಲು । ಮಹಾಲಯ ಪುಣ್ಯದಿವಸದಿ । ಬಲ್ಲಿದೇಕಾದಶಿ ಪರ್ವಣಾ ಅಮಾವಾಸ್ಯೆ ಇಷ್ಟ ರತಿ ರವಿ

ಗ್ರಹಣದಲ್ಲಿ ಅಲ್ಲದೈಯ್ಯ । ದಂತಕಾಷ್ಠಮುಲಿನಗಳಿಗೆ ಝುಲ್ಲಿಸಿ ನೀರು ಮುಕ್ಕಳಿಸಿ ಹನ್ನೆರಡು । ಬಲ್ಲ ಬುಧರಿಗೆ ಪುರಂದರವಿಠಲ ಇಲ್ಲಿ ವಲಿವಾಯಿದೆ ಚರಿಸೆ ॥ ಶ್ರೀ ॥

೧೦೫.

ಅಂದವಿಲ್ಲದ ಅಶಕ್ತನಿಗೆ ಒಂದೆ ಅರುವೆಯಲ್ಲಿಂದ ವೈದೊಳಮು ಮಡಿವುಟ್ಟು ನಾಮುಗಳಿಟ್ಟು । ಚಂದದಲಿ ಸಂಧ್ಯಾವಂದನೆ ಮಾಡಿ ಫಲವಾಹದು। ನಿಂದೆ ಹೇಗೆ ತಿಂದು ಮಾಡಿದ ಮನುಜಗೆ। ಇಂದ್ರ ಹದಿನಾಲ್ಕು ಮನುನರಕವೆಂದು ಅಂದು ಪುರಂದರವಿಠಲ ಪೇಳಿದೆಂದು ಸಿದ್ಧಾ ॥

೧೦೬.

ಕುಲಪತಿಯಾದರು ಸಂಧ್ಯಾವಂದನೆ ಗೈಯದ ಪಾಪಿಯಾದರು । ಪರದ್ರೋಹಿಯಾಗೆ ಪಾಪಗೈದು ಪರಪತ್ನಿಯನ್ನೈದಿರೆ । ಶ್ರೀಪತಿ ಗೋಪಿ ಚಂದನಲಿಪ್ತಾಂಗಗೆ । ಭೂಪತಿ ಪುರಂದರವಿಠಲ ಪಾದವ ತೋರ್ಪಾ ॥

೧೦೭.

ಕಂಡಾಸಿಶದಲ್ಲಿ ಅರ್ಘ್ಯವನು । ಪ್ರಾತರದಿ ಮಂಡಲಾಕಾರ । ಮಧ್ಯಾಹ್ನದಲ್ಲಿ ಪುಂಡಗಾರನಾಗಿ ಚರಿಸದಲಿ ಇದ್ದರೆ ಅವಗೆ। ಪಂಡಿತ ಶ್ರೀಪುರಂದರವಿಠಲ ವಲಿಯಾ ॥ ೧ ॥ ಶ್ರೀ ॥

೧೦೮.

ನಿನ್ನ ದಾಸನಾಗಿ ನಿನ್ನೆಂಜಲನುಂಡು ನೀನುದಾಸೀನ ಮಾಡಿದರೆ ಲೋಕರು ನಗರೇ । ನಿನ್ನ ಚರಣಕಮಲವನ್ನು ಕೊರಳಲಿ ಕಟ್ಟುವೆ ಪುರಂದರವಿಠಲಾ ॥ ಶ್ರೀ ॥

೧೦೯.

ಅನಾಮಿಕಾಖ್ಯ ಮಧ್ಯದ ಯೆರಡನೆ ಗೆರೆ ಆದಿ । ಯೆಣಿಸಿತು ಮಧ್ಯಾಂಗುಲಿ ಕೊನೆ ಗೆರೆ ಕೂಡಿಸಿ । ಮನಮೂರ್ತಿ ಪರಿಮಾಣ ಅಂಗುಷ್ಠದಿಂದಲಿ । ಯೆಣಿಸು ತರ್ಜನಿಮೂಲ ಪರ್ಯಂತರ । ಘನ

ಹತ್ತು ಗೆರೆ ಜಪ ಪುರಂದರವಿಠಲಗೆ । ಮನದಿ ಅರ್ಚಿಸುತ ಗಾಯತ್ರಿ ಜಪವಾ ॥ ಶ್ರೀ ॥

೧೧೦.

ಉದಯಕಾಲದ ಜಪ ನಾಭಿಗೆ ಸರಿ । ಹೃದಯಕ್ಕೆ ಸರಿಯಾಗಿ ಮಧ್ಯಾಹ್ನದಿ । ವದನಕ್ಕೆ ಸಮಾನ ಸಾಯಂಕಾಲಕ್ಕೆ ನಿತ್ಯ । ಪದುಮ ನಾಭ ತಂದೆ ಪುರಂದರವಿಠಲಗೆ। ಇದೆ ಗಾಯತ್ರಿಯಿಂದ ಜಪಿಸಬೇಕೂ॥

೧೧೧.

ಬಿಡು ಮನುಜ ಈ ಜಪವು ಸಿದ್ಧಿ ಬಾರದು । ತೊಡೆ ಕೆಳಗೆ ಕೈ ಹಿಂದೆಮುಂದೆ ಕೈ ಚಾಚಿಬಿಡುತ ಮಂತ್ರಾರ್ಥ ನೋಡದಲೆ। ಅಡಿಗಡಿಗೆ ಜಪವ ಮಾಡೆ ದೈತ್ಯರಿಗೆ ಅಹುದಯ್ಯ । ಒಡೆಯ ಪುರಂದರವಿಠಲನೊ ಲಿಸಬೇಕಾದರೆ । ಹಿಡಿಯೊ ಈ ಪರಿ ತಿಳಿದ ವಚನತತ್ವಗಳಾ ॥

೧೧೨.

ಮಧ್ಯಾಂಗುಲಿ ಮೇಲೆ ಮಣಿಸರವಿಟ್ಟಿನ್ನು । ಬದ್ಧ ಅಂಗುಟಾಗ್ರ ಯೆಣಿಸಬೇಕು । ಕಿರಿ ಅಂಗುಲಿ ಪಂಚ ಭೋಗಿಸಿ ಇರಬೇಕು । ಭದ್ರ ವಾಗಿ ನಿಲ್ಲಿಸಿ ನೀರು ಸೋರದೆ ಗಾಯತ್ರಿ । ಬುದ್ಧಿಪೂರ್ವಕದಿಂದ ಗೈವು ತಲಿರಬೇಕು । ಮುದ್ದುಮೂರುತಿ ನಮ್ಮ ಪುರಂದರವಿಠಲನ । ಯುಪ ವೆಂದು ನೋಡುವಾ ಬಗೆ ಕಾಣಲಿಬೇಕು ॥ ಶ್ರೀ ॥

೧೧೩.

ಅಪರಾಧ ಹತ್ತಕ್ಕೆ ಅಭಿಷೇಕ ಉದಕ। ಅಪರಾಧ ನೂರಕ್ಕೆ ಕ್ಷೀರ ಹರಿಗೆ। ಅಪರಾಧ ಸಹಸ್ರಕ್ಕೆ ಹಾಲು ಮೊಸರು ಕಾಣೋ ॥ ಅಪರಾಧ ಲಕ್ಷಕ್ಕೆ ಜೇನು ಘೃತ । ಅಪರಾಧ ಹತ್ತುಲಕ್ಷಕ್ಕೆ ಬಲುಪರಿ ಕ್ಷೀರಾ ॥ ಅಪರಾಧ ಕ್ಷಮೆಗೆ ಅಚ್ಚ ತೆಂಗಿನ ಹಾಲು। ಅಪರಾಧ ಕೋಟಿಗೆ ಸ್ವಚ್ಛ ಜಲಾ ॥ ಅಪರಾಧ ಅನಂತ ಕ್ಷಮೆಗೆ ಗಂಧೋದಕ । ಉಪಮೆರಹಿತ ನಮ್ಮ ಪುರಂದರವಿಠಲಗೆ ಶಾಂತಮನವಯ್ಯ ಶಾಂತವಾಕ್ಯ॥ ಶ್ರೀ ॥

## ೧೧೪.

ಆರು ಅಕ್ಷರದಿಂದ ವ್ಯಾಹೃತಿಯಿಂದ ಓಂಕಾರವಾಗುವದು । ಕೇಳಿ ಈ ಪರಿ ಇಪ್ಪತ್ತುನಾಲ್ಕು ಅಕ್ಷರದಿಂದ ತೋರುತಲಿ ಗಾಯತ್ರಿ ರಸಿಚಿದ ಹರಿಯ ಮೆರವದ್ಯೆ ಪುರುಷಸೂಕ್ತದಿ ಅನಂತ ವೇದರಾಶಿ ಧೊರೆಯೆಂದು ಪೊಗಳುವವೋ ॥ ಓಂಕಾರ ಶ್ರೀಕಾರ ಮೆರವದ್ಯೆವತ್ತೊಂದು ಲಕ್ಷಗಳು ಈ ಕೃತಿ ಅಶೇಷ ಗುಣಾಧಾರ ಯೆಂದು ನಾರಾಯಣೋದಪೂರ್ಣಗುಣ ನುತ ಭರದಿ ಜ್ಞಾನರೂಪಾಶನೋ ಮೆರವಾದೆಲಿ ಶಾಸಟರ್ದವಧರಿಶಿಗೆ ಪುರಂದರವಿಠಲ ಓಂಕಾರ ॥ ಶ್ರೀಃ ॥

## ೧೧೫.

ನೀನೆ ಕರ್ತನು ಅಕರ್ತ ಸಿರಿ ಅಜಭವಾದಿ ಇಂದ್ರಾದ್ಯಮರರು । ನೀನೆ ಸ್ವಾತಂತ್ರ ಅಸ್ವತಂತ್ರರವರು ನೀನೆ ಸರ್ವಾತ್ಮಕನಾಗಿ ಸ್ವೀಕರಿಸು ವಾ । ಜ್ಞಾನ ನಿನ್ನಾಧೀನ ಕರ್ಮ ನಿನ್ನಾಧೀನ । ಅನಾದಿ ಕಾಲದಿ ಇರುವ ಜೀವರಿಗೆ ನೀನೆ ಸುಖವನೀವಿ ರುದ್ಧಕರ್ಮಗಳಂತೆ । ಅನಾದಿ ಕಾಲದಿ ಜೀವ ಕರ್ಮ ಜ್ಞಾನ ಅನಾದಿಗಳು ನಿನ್ನಾಧೀನವಯ್ಯಾ । ಅನಾದಿ ಕರ್ಮ ನೀನೆ ಪುರಂದರವಿಠಲ । ನೀನೆ ಸಲಹೋ ನಿನ್ನ ಅಡಿ ಪೊಂದಿದವರಾ ॥

## ೧೧೬.

ಮುಟ್ಟು ಯುವತಿಯು ಶಬ್ದ ಕೇಳಿದಡೆ ಪಾಪ । ಎಂಟೆರಡು ಮೂರಾಚಮನಕೆ ಪರಿಹರವೋ । ದೃಷ್ಟಿಸಿ ನೋಡಿದರೆ ಥಟ್ಟನೆ ಜಲ ವಲ್ಲಿ ಐನೂರು ಸ್ನಾನದಿ ಶುದ್ಧ । ಮೆಟ್ಟಿದಡೆ ಕುಳಿತ ಸ್ಥಳ ಮೂರು ದಿನ ವರ್ಜಿಸಲು ಬೇಕು । ಉಚ್ಛಿಷ್ಟ ಸೋಂಕಲು ಐದು ನಿರಹಾರವಣ್ಣಾ ॥ ಇಷ್ಟು ಮಾಡಿದಡೆ ಪಾಪ ಪರಿಹರವಯ್ಯಾ । ಶಿಷ್ಟರಲ್ಲದೆ ಮತ್ತು ಯೆಲ್ಲವ ರಿಗೆ ಅಸಾಧ್ಯವಿದು । ಘಟ್ಯಾಗಿ ಜಗನ್ನಾಥ ಎಂದರೆ । ಮುಟ್ಟಲಂಜುವ ದಘವು ಓಡಿಪೋಗುವದಯ್ಯಾ । ಇಷ್ಟೆಲ್ಲ ಒಂದೆಮಾತ್ರದಿ ಪದ್ಮಪುರಾಣವ ವಿಚಾರಿಸು ಮನುಜಾ ಅಲ್ಲಿ । ಸ್ಪಷ್ಟವಾಗಿ ಪೇಳುವದು ವಚನ । ಜಗ ನ್ನಾಥನ ನಂಬುವರೆ ಯೆಲ್ಲ ಕೇಳಿರಯ್ಯಾ । ಗುರು ಪುರಂದರವಿಠಲನ ಪದವಿಯ ಬೇಡುವರೂ ॥ ಶ್ರೀಃ ॥

೧೧೭.

ನಿನ್ನ ಭಕ್ತರೆಂದೆನಿಸಿದ ಜನರು ಭಂಗಪಡಲುಬೇಕು । ದಿನಪ್ರತಿ ದೀನ ಅನ್ನ ಉದಕ ವಸ್ತ್ರಗಳು ಕಾಣದೆ ಇರಬೇಕು ॥ ಬೆನ್ನತ್ತಿ ರೋಗಗಳು ಹತ್ತಿ ಇರಲುಬೇಕು । ತನ್ನವರ ಕೈಯಿಂದ ಛೀ ಎನಿಸಿಕೊಳ್ಳಬೇಕು । ಪನ್ನಗಶಯನ ಶ್ರೀಪುರಂದರವಿಠಲಾ ॥ ಶ್ರೀ ॥

೧೧೮.

ಹೇಗೆ ಬರದೀತು ಪ್ರಾಚೀನದಲ್ಲಿ । ಹಾಗೆ ಇರಬೇಕು ಸಂಸಾರದಲ್ಲಿ । ಪಕ್ಷಿ ಕೂತಿತು ಅಂಗಳದಲ್ಲಿ । ಹಾರಿಹೋಯಿತು ಆಕ್ಷಣದಲ್ಲಿ । ಆಡುವ ಮಕ್ಕಳು ಮನೆ ಕಟ್ಟಿದರು । ಆಟ ಸಾಕೆಂದು ಮುರಿದೋಡಿದರು । ಸಂತೆ ನೆರದೀತು ನಾನಾ ಪರಿ । ತಿರಿಗಿ ಆಯಿತು ತಮ್ಮ ತಮ್ಮ ದಾರಿ । ವಸ್ತಿಕಾರನು ವಸ್ತಿಗೆ ಬಂದ । ಹೊತ್ತಾರೆ ಯೆದ್ದು ಊರಿಗೆ ಹೋದ । ಈ ಸಂಸಾರಮಾಯ ಬಿಡಿಸಿ । ಕಾಯೊ ಪುರಂದರವಿಠಲಾ ॥

೧೧೯.

ತನ್ನ ತಾನರಿಯದಾ ಜ್ಞಾನವೇನೋ । ಚನ್ನ ಶ್ರೀಪುರಂದರವಿಟ್ಠಲನ ನೆನೆಯದವ । ಸನ್ಯಾಸಿಯಾದರೇನು ಷಂಡನಾದರೆಯೇನು ॥

೧೨೦.

ಹುಟ್ಟುವ ಭೀತಿ ಹೊಂದುವ ಭೀತಿ । ವಿಟ್ಠಲನಂಘ್ರಿಯ ನೆನೆಯದವರಿಗೆ । ಕಾಲನ ಭೀತಿ ಕರ್ಮದ ಭೀತಿ ಗೋ । ಪಾಲನ ದಾಸನಾಗದವನಿಗೆ । ಅರಿಷಡ್ವರ್ಗದ ಮಹಾ ಭೀತಿ ಶ್ರೀ । ಹರಿನಾಮವನುಚ್ಚರಿಸದವಗೆ । ಹಲವು ಮಾತಿನ್ನೇನು ಹಲವು ಭೀತಿ । ಚಲುವ ಪುರಂದರವಿಟ್ಠಲನ್ನ ಪೂಜಿಸದವಗೆ ॥ ಶ್ರೀ ॥

೧೨೧.

ಎನ್ನಮ್ಮ ಸಿರಿದೇವಿ ಇನ್ನು ಅರಿಯಳು ಮಹಿಮೆ । ಕುನ್ನಿ ಮಾನವನು ನಾನೇನು ಬಲ್ಲೆನು । ಪನ್ನಗಾದ್ರಿನಿಲಯನೆ ಪಾವನಮೂರ್ತಿ ಕೃಷ್ಣ । ಎನ್ನನುದ್ಧರಿಸಯ್ಯ ಪುರಂದರವಿಟ್ಠಲ ॥ ಶ್ರೀ ॥

### ೧೨೨.

ಬೆಟ್ಟದಂಥ ದುರಿತವು ಸುತ್ತುಮುತ್ತಲೊಟ್ಟಿರೆ । ಕೃಷ್ಣನಾಮದ ಕಿಡಿ ಬಿದ್ದು ಬೆಂದುಹೋದದ್ದು ಕಂಡೆ । ಎಲೆ ಎಲೆ ದುರಿತವೆ ತಿರುಗಿ ನೋಡದೆ ಹೋಗು । ಎಲೆ ಎಲೆ ದುರಿತವೆ ಮರಳಿ ನೋಡದೆ ಹೋಗು । ನಿನ್ನ ಕಂಡರೆ ಶಿಕ್ಷಿಸದೆ ಬಿಡ । ಇನ್ನೊಮ್ಮೆ ಕಂಡರೆ ಶಿರವ ಚೆಂಡಾಡುವನು । ಪುಂಡರೀಕಾಕ್ಷ ನಮ್ಮ ಪುರಂದರವಿಠಲ ॥ ಶ್ರೀಃ ॥

### ೧೨೩.

ಎನಗೆ ನಿನ್ನಲ್ಲಿ ಭಕ್ತಿ ಇರಲಿ ಇಲ್ಲದಿರಲಿ । ಹರಿದಾಸನೆಂದೆನ್ನ ಕರೆವರು ಸಜ್ಜನರು । ಹರಿದಾಸನ್ನ ಯಾವ್ಯರು ಎಳೆವರೆಂಬ ಅಪಕೀರ್ತಿಯ । ಪರಿಹರಿಸಿಕೊಳ್ಳೊ ಶ್ರೀಪುರಂದರವಿಠಲ ॥ ಶ್ರೀಃ ॥

### ೧೨೪.

ಮಲಗಿ ಪಾಡಿದರೆ ಕುಳಿತು ಕೇಳುವನು । ಕುಳಿತು ಪಾಡಿದರೆ ನಿಂತು ಕೇಳುವನು । ನಿಂತು ಪಾಡಿದರೆ ನಲಿದು ಕೇಳುವನು । ನಲಿದು ಪಾಡಿದರೆ ಸ್ವರ್ಗ ಸೂರೆಬಿಟ್ಟೆನೆಂಬ ಪುರಂದರವಿಠಲ ॥ ಶ್ರೀಃ ॥

### ೧೨೫.

ಅನುಕೂಲವಿಲ್ಲದ ಸತಿಯು ವರ್ಜಿಸಬೇಕು । ವಿನಯದಿ ಗುರುಹಿರಿಯರ ಪೂಜಿಸಬೇಕು । ಮನಕೆ ಬಾರದ ಠಾವು ಬಿಟ್ಟು ತೊಲಗಬೇಕು । ವನಜನಾಭನ ದಾಸರ ಸಂಗವಿರಬೇಕು । ಪುರಂದರವಿಠಲನ ಚರಣವನು ನಿತ್ಯ ನೆನೆಯುತಲಿರಬೇಕು ॥ ಶ್ರೀಃ ॥

### ೧೨೬.

ನಿನ್ನ ಕಾಲ್ಗೆಜ್ಜೆಯ ಪಿಡಿದು ನಾ ನಿಲ್ಲುವೆ । ನಿನ್ನ ಪಂಜು ಹಿಡಿದು ಒಡ್ಡಿ ಬೊಬ್ಬಿಡುವೆ । ನಿನ್ನ ಛತ್ರಚಾಮರ ಪಿಡಿದೇಳುವೆ । ನೀರು ನಿವಾಳಿಸಿಕೊಂಡು ಕೊಬ್ಬುವೆನು । ಬಿಡೆನು ಬಿಡೆನು ನಿನ್ನ ಚರಣಕಮಲವ । ಪುರಂದರವಿಠಲ್ಲ ನಿನ್ನ ಪಾವಪ ಬಿಡೆನು ॥ ಶ್ರೀಃ ॥

೧೨೭.

ಏನು ಓದಿದರೇನು ಏನು ಕೇಳಿದರೇನು । ಹೀನ ಗುಣಗಳ ಹಿಂಗದ ಜನರು । ಮಾನಾಭಿಮಾನವ ನಿನಗೊಪ್ಪಿಸಿದ ಮೇಲೆ । ನೀನೆ ಸಲಹಬೇಕೊ ಪುರಂದರವಿಟ್ಠಲ್ಲ ॥ ಶ್ರೀಃ ॥

೧೨೮.

ಮನೆಯೆಂಬ ಆಸೆಯು ಎನ್ನ ಮುಂದುಗೆಡಿಸುತಿದೆ । ಮನೆ ವಾರು ತೆಯು ಎನ್ನ ಭಂಗಪಡಿಸುತಿದೆ । ಸುತರಾಸೆಯು ಎನ್ನ ದೈನ್ಯಪಡಿಸು ತಿದೆ । ಇನಿತಾಸೆಯುಳಿದು ಬುದ್ಧಿ ನಿನ್ನಲ್ಲಿ । ನಿಲುವಂತೆ ಮಾಡೊ ಸಿರಿ ಪುರಂದರವಿಠಲರಾಯ ॥ ಶ್ರೀಃ ॥

೧೨೯.

ಇಲ್ಲಿಂಥಾ ಸುಖಗಳುಂಟೋ ಅಲ್ಲಿಂಥಾ ಸುಖಗಳುಂಟು । ದುಃಖ ಮಿಶ್ರವಾದ ಸುಖ ಇಹಲೋಕದಲ್ಲಿಪ್ಪುದು ನಾಶವುಂಟು । ದಿನಕೊಂದು ಬಗೆ ಬಗೆಯಾವಂಥ ಸುಖವಾಗಿ ನಾಶವಿಲ್ಲದ । ಪ್ರಾಕೃತವಾದ ಸುಖವ ನನುಭವಿಸುತ್ತ ಕ್ರಮದಿ ತಿರುಗುವರು । ಅಂದೋಳಿಕ ಛತ್ರಚಾಮರ ಸದಾ ಪೀತಾಂಬರ ಶಂಖಚಕ್ರಗಳಿಂದೊಪ್ಪುತ । ಗುರು ಪುರಂದರ ವಿಠಲನ ಭಜಿಸು ಜೀವ ॥ ಶ್ರೀಃ ॥

೧೩೦.

ಅಲ್ಲಿ ವನಗಳುಂಟು ಅಪ್ರಾಕೃತವಾದ ಫಲಪುಷ್ಪಗಳಿಂದೊಪ್ಪುತ್ತಿ ಲಿಹುದು । ಪಕ್ಷಿಜಾತಿಗಳುಂಟು ಅತಿ ವಿಲಕ್ಷಣವಾದ ಕಿಲ ಕಿಲ ಶಬ್ದವು ರಂಜಿಸುವ ನುಡಿಗಳು । ಮುಕುತರು ಬಂದು ಜಲಕ್ರೀಡೆಗಳ ಮಾಡಿ ಕುಳಿತು ಸುಖಿಪರು । ಇಂಥಾ ಸುಖ ಬೇಕಾದರೆ ನೀಚವೃತ್ತಿಯ ಬಿಟ್ಟು ಪರಲೋಕ ಸುಖವೀವ ಪುರಂದರವಿಠಲನ ಭಜಿಸು ಜೀವ ॥ ಶ್ರೀಃ ॥

೧೩೧.

ಮಾರಿಯು ಕೈಯಿಂದ ನೀರ ತರಿಸುವರು । ಮಸಣಿಯ ಕೈಯಿಂದ ಕಸವ ಬಳಿಸುವರು । ಮೃತ್ಯುವಿನ ಕೈಯಿಂದ ಬತ್ತವ ಕುಟ್ಟಿಸುವರು

ಜವನವರ ಕೈಯಿಂದ ಜಂಗುಲಿಯು ಕಾಯಿಸುವರು । ಪುರಂದರವಿಠಲನ ದಾಸರು ಸರಿಬಂದ ಹಾಗಿಹರು ಭೂಮಿಯ ಮೇಲೆ ॥ ಶ್ರೀಃ ॥

೧೩೨.

ಶ್ರವಣದಿಂದ್ಹೋಯಿತು ಬ್ರಹ್ಮಹತ್ಯ ಪಾಪವು । ಸ್ಮರಣೆಯಿಂದ್ಹೋಯಿತು ಸೇರಿದ್ದ ಪಾಪವು । ಎಲ್ಲಿದ್ದ ಅಜಮಿಳ ಎಲ್ಲಿತ್ತು ವೈಕುಂಠ । ಕೊಟ್ಟಾತನೆ ಬಲ್ಲ ಪುರಂದರವಿಠಲ ॥ ಶ್ರೀಃ ॥

೧೩೩.

ಕಾಲ ಮೇಲೆ ಮಲಗಿ ಸಿಂಪಿಲಿ ಹಾಲ ಕುಡಿದು ಬೆಳೆದೆ । ಮೂರು ಲೋಕವು ನಿನ್ನುದರದಲ್ಲಿರಲು । ಈರೇಳು ಲೋಕವ ನೀರಡಿ ಮಾಡಲು । ಮೂರು ಲೋಕದೊಡೆಯ ಶ್ರೀಪುರಂದರವಿಟ್ಠಲ ನಿನ । ಬಾಲಕತನದ ಲೀಲೆಗೆ ನಮೋ ನಮೋ ॥ ಶ್ರೀಃ ॥

೧೩೪.

ಒಬ್ಬರ ಭಂಟನಾಗಿ ಕಾಲ ಕಳೆವುದಕಿಂತ । ನಿರ್ಬಂಧವಿಲ್ಲದ ತನ್ನಿಚ್ಛೆಯೊಳಿದ್ದು । ಲಭ್ಯವಾದೊಂದು ತಾರಕ ಸಾಕು ಸಾಕು ಎನಗೆ । ಅಬ್ಬರ ಒಲ್ಲೆನಯ್ಯ ಅಷ್ಟರಲ್ಲೆ ಸಂತುಷ್ಟ ಗರ್ಭಿ । ಕರುಣಾಕರ ಪುರಂದರವಿಠಲ ಲಭ್ಯ ಒಂದು ತಾರಕ ಸಾಕು ಸಾಕು ॥ ಶ್ರೀಃ ॥

೧೩೫.

ಮುಟ್ಟಬೇಡ ಅಚ್ಯುತಗರ್ಪಿತವಲ್ಲದನ್ನ ಕಂ । ಗೆಟ್ಟು ತುತಿಸಬೇಡ ಹರಿಯಲ್ಲದನ್ಯತ್ರ । ಕಷ್ಟ ಬೇಡ ಭೂಸುರರಲ್ಲಿ ದುಷ್ಟಜನರ ಸಂಗ ಬೇಡ । ಶ್ರೀಪುರಂದರವಿಠಲನಂಘ್ರಿಯ ನೆನೆಯುತಲಿರು । ಕಷ್ಟ ಬೇಡ ಭೂಸುರರಲ್ಲಿ ॥ ಶ್ರೀಃ ॥

೧೩೬.

ತಂಬೂರಿ ಮೀಟಿದವ ಭವಾಬ್ಧಿ ದಾಟಿದವ । ತಾಳವ ತಟ್ಟಿದವ ಸುರರೊಳು ಸೇರಿದವ । ಗೆಜ್ಜೆಯ ಕಟ್ಟಿದವ ಖಳರೆದೆ ಮೆಟ್ಟಿದವ

ನಾಯನ ಪಾಡಿದವ ಹರಿಮೂರ್ತಿ ನೋಡಿದವ । ಪುರಂದರವಿಠಲನ ನೋಡಿದವ ವೈಕುಂಠಕೋಡಿದವ ॥ ಶ್ರೀ ॥

೧೩೭.

ಹರಿಯೆಂಬೋದೆ ಲಗ್ನಬಲವು ಹರಿಯೆಂಬೋದೆ ಸುದಿನಬಲವು । ಹರಿಯೆಂಬೋದೆ ತಾರಾಬಲವು ಹರಿಯೆಂಬೋದೆ ಚಂದ್ರಬಲವು । ಹರಿಯೆಂಬೋದೆ ವಿದ್ಯಾಬಲವು ಹರಿಯೆಂಬೋದೆ ದ್ರವ್ಯಬಲವು । ಹರಿ ಲಕ್ಷ್ಮೀಪತಿ ಪುರಂದರವಿಠಲನೆ ಬಲವಯ್ಯ ಸರ್ವಸುಜನರಿಗೆ ॥ ಶ್ರೀ ॥

೧೩೮.

ಕ್ರಿಮಿಕೀಟನಾಗಿ ಹುಟ್ಟಿದಂದು ಹರಿಶರಣೆಂತೆನಲುಂಟೆ । ಹರಿಣನಾಗಿ ಹುಟ್ಟಿದಂದು ಹರಿಶರಣೆಂತೆನಲುಂಟೆ । ಕತ್ತೆ ಕರಡಿಯಾಗಿ ಹುಟ್ಟಿದಂದು ಹರಿಶರಣೆಂತೆನಲುಂಟೆ । ಹಂದಿ ಶುನಕನಾಗಿ ಹುಟ್ಟಿದಂದು ಹರಿಶರಣೆಂತೆನಲುಂಟೆ । ಮರೆತೀಯೆ ಮಾನವ ನಿನ್ನ ಹಿಂದಿನ ಭವಗಳನೊಂದು । ಮಾನುಷ ದೇಹ ಬಂದೀತೊ ನಿನಗೀಗ । ಬೇಗ ನೆನೆಯೆಲೊ ಪುರಂದರವಿಟ್ಠಲರಾಯನ ॥ ಶ್ರೀ ॥

೧೩೯.

ಒಂದು ಕಾಲದಲ್ಲಿ ಆನೆ ಕುದುರೆ ಮೇಲ್ಮೆರೆಸುವೆ । ಒಂದು ಕಾಲದಲ್ಲಿ ಬರಿಗಾಲಲ್ಲಿ ನಡೆಸುವೆ । ಒಂದು ಕಾಲದಲ್ಲಿ ಮೃಷ್ಟಾನ್ನ ಉಣಿಸುವೆ । ಒಂದು ಕಾಲದಲ್ಲಿ ಉಪವಾಸವಿರಿಸುವೆ । ಪನ್ನಂಗಶಯನ ಶ್ರೀಪುರಂದರವಿಟ್ಠಲ ॥ ಶ್ರೀ ॥

೧೪೦.

ಸ್ತ್ರೀಯರಿಗೆ ಪುರುಷರು ಮೋಹಿಸುವರಲ್ಲದಲೆ । ಪುರುಷರಿಗೆ ಪುರುಷರು ಮೋಹಿಸುವರುಂಟೆ । ಹರಿ ಪರಮಪುರುಷ ಪುರುಷೋತ್ತಮ ಪುರುಷ ಬ್ರಹ್ಮಾದಿಗಳು ನಿನಗೆ ಮೋಹಿಸುವರು ತಿರುವೆಂಗಳಪ್ಪ ಸಿರಿ ಪುರಂದರವಿಠಲ । ಧರೆಯೊಳು ನೀನು ಮೋಹನರೂಪ ಕಾಣೊ ॥

## ೧೪೧.

ಒಂದಕ್ಷರವ ಪೇಳಿದವರು ಉರ್ವಿಯೊಳು ಅವರೆ ಗುರು। ಎಂದು ಇಳೆಯೊಳು ಬಹುಮಾನ ಮಾಡಬೇಕು ಕುಂದದೆ । ಒಂದಿಷ್ಟು ಅವ ಮಾನ ಮಾಡಿದರೆ ತಪ್ಪದೆ। ಒಂದು ನೂರು ಶ್ವಾನಜನ್ಮ ಕೋಟಿ ಹೊಲೆ ಜನ್ಮ। ತಂದೀವನು ಪುರಂದರವಿಠಲ ॥ ಶ್ರೀ ॥

## ೧೪೨.

ಅಂದು ಗೋಕುಲದಲ್ಲಿ ಗೋಪಾಲಕರಾಗಿ ಅನಿಮಿಷರೆಲ್ಲ ಸಾಲೋಕ್ಯವ ಪಡೆದರು । ಅಂದು ಗೋವುಗಳಾಗಿ ಸಾಧನವ ಮಾಡಿ ಸಾಮೀಪ್ಯವನ್ನು ಪಡೆದರು ಕೆಲರು। ಅಂದು ನಿನ್ನನು ಕೂಡಿ ಆಡಿ ಸಾರೂಪ್ಯ ಎಂಬ ಮುಕ್ತಿಯ ಪಡೆದರು ತತ್ವಾಭಿಮಾನಿಗಳು । ಒಂದೊಂದು ಅವಯವದಲ್ಲಿ ಸಾಯುಜ್ಯವೆಂಬ ಮುಕುತಿಯ ಪಡೆದರು ಕೆಲವರು । ಆಗ ಸಾಯುಜ್ಯ ಸರ್ವಾಂಗದಲ್ಲಿ ಅಜಗಿತ್ತು ಸಲಹಿದೆ । ಅನುಪಮ ಗುಣ ನಿಲಯ ಗುರು ಪುರಂದರವಿಠಲ ಮುಖ್ಯ ಪ್ರಧಾನನಿಗೆ ॥ ಶ್ರೀ ॥

## ೧೪೩.

ಇಂದಿನ ದಿನ ಶುಭ ದಿನಾ । ಇಂದಿನ ವಾರ ಶುಭ ವಾರ । ಇಂದಿನ ಕರಣ ಶುಭ ಕರಣ। ಇಂದಿನ ಯೋಗ ಶುಭ ಯೋಗಾ । ಇಂದು ಪುರಂದರವಿಠಲರಾಯನ ಆಡಿದ ದಿನವೆ ಶುಭ ದಿನವೂ ॥ ಶ್ರೀ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

# ಪುರಂದರದಾಸರ ಕೀರ್ತನೆಗಳ ಐದನೆಯ ಭಾಗವು

# ಸಂಪೂರ್ಣವು.

॥ ಶ್ರೀಕೃಷ್ಣಾರ್ಪಣಮಸ್ತು ॥

